# ಜೀವನದ ಸೊಗಸು

ನಿತ್ಯಜೀವನದಿಂದ
ಆರಿಸಿ ತೆಗೆದ ಹದಿನೆಂಟು ವಿನೋದ ಚಿತ್ರಗಳು

ಕುಡ್ಪಿ ವಾಸುದೇವ ಶೆಣೈ

1935

ಬೆಲೆ ಆಣೆ 4

# ಜೀವನದ ಸೊಗಸು!



## ೧. ಮದುವೆಯ ಏಜಂಟ.

ಏಮಾ ಏಜಂಟರಿಗಿಂತ ಎರಡು ಮಾತುಗಳನ್ನು ಹೆಚ್ಚಾಗಿ ಮಾತಾಡಿ, ಆಡಿದ ಸುಳ್ಳನ್ನು ಸತ್ಯವೆಂದೇ ಹಟ ಹಿಡಿದು ವಾದಿಸುವ ಏಜಂಟರಾರೂ ಇರುವರಾದರೆ— ಅವರೇ ಇವರು— ಮದುವೆಯ ಏಜಂಟರು. ಅಷ್ಟೇ ಅಲ್ಲ, ಏಮಾ ಏಜಂಟರು ತಿಳಿಯದ ಒಂದೆರಡು ಚಿಕ್ಕ ಆಟಗಳನ್ನು ಈ ಏಜಂಟರು ಅರಿತಿರುವರು.

ರಾಮಚಂದ್ರನಾಯ್ಕರು ತಮ್ಮ ಹೆಂಡತಿಯ ಅಕಾಲ ನಿಧನವನ್ನು ಚಿಂತಿಸುತ್ತ ಈ ಐವತ್ತನೆ ವಯಸ್ಸಿನಲ್ಲಿ ತನಗೆ ಮತ್ತೊಂದು ಹೆಣ್ಣನ್ನು ಕೊಡುವ ವಿವೇಕಿಯು ಈ ಮೂಢ ಜಗತ್ತಿನಲ್ಲಿರುವನೇ ಎಂದು ಆಶ್ಚರ್ಯ ಪಡುತ್ತಿರಲು, ಹರೆ ಕಳ ಗೋವರ್ಧನರಾಯರು— ಶತ್ರು ಸೈನ್ಯದಿಂದಾವೃತನಾಗಿ ಚಿಂತಿಸುತಿದ್ದ ಅರಸನ ಸಮ್ಮುಖಕ್ಕೆ ಬರುವ ಸಾಹಸೀ ಸೇನಾ ನಾಯಕನಂತೆ ಸೆಟ್ಟಗೆ ಬಂದು, “ನಮಸ್ಕಾರ!” ಎಂದರು.

ಮಾತುಕತೆಗಳು ನಡೆದುವು. ಮುೂಲ್ಕಿಯಲ್ಲಿ ಸಂಪ ದ್ಗಿರಿರಾಯರ ಮಗಳು ಬೆಳೆದಂತೆಯೂ, ಅವರು ರಾಮಚಂದ್ರ ನಾಯ್ಕರ ಧ್ಯಾನದಲ್ಲೇ ಇದ್ದಂತೆಯೂ ತಿಳಿದು ಬಂತು. ಗೋವರ್ಧನರಾಯರು ಜತೆಯಲ್ಲಿ, ಆ ಹುಡುಗಿಯ ಫೊಟೋ ವನ್ನೂ ತಂದಿದ್ದರು. ಸಂಪದ್ಗಿರಿರಾಯರು ಒಂದುವರೆ ಸಾವಿರ ವರದಕ್ಷಿಣೆ ಕೊಡುವರು; ವಿವಾಹಕ್ಕೆ ಒಪ್ಪಿಗೆಯನ್ನು

ಮರುದಿನವೇ ಕಳುಹಬೇಕಾಗಿ ಹೇಳಿ ಕಳುಹಿರುವರು. ಗೋವರ್ಧನರಾಯರು ಪರೋಪಕಾರಾರ್ಥ ಇತ್ತ ಬಂದಿರುವರು;— ಇವಿಷ್ಟು ಸಂಗತಿಗಳು ಹೊರಬಿದ್ದುವು.

ರಾಮಚಂದ್ರನಾಯ್ಕರು ಅವರನ್ನು ಚೆನ್ನಾಗಿ ಸತ್ಕರಿಸಿದರು. ಮದುವೆಯಾಗಲು ತನ್ನ ಆಕ್ಷೇಪವೇನೂ ಇಲ್ಲವೆಂದರು. ಆ ಮೇಲೆ ಫೊಟೋ ನೋಡಿದರು. ಅನಂತರ, ಪುನಃ ತಮ್ಮ ಆಕ್ಷೇಪವೇನೇನೂ ಇಲ್ಲವೆಂದರು.

ತನಗೆ ಸಂತೋಷವಾಯಿತೆಂದರು ಗೋವರ್ಧನರಾಯರು. ಆ ರಾತ್ರಿ ಅಲ್ಲೇ ಉಳಕೊಂಡು, ಮರುದಿನ ಎದ್ದು, ನಾಯ್ಕರೊಂದಿಗೆ ಫಲಾಹಾರ ತೀರಿಸಿ, ಮೂಲ್ಕಿಗೆ ಹೋಗಿ ಬರಲು ಹತ್ತು ರೂಪಾಯಿಗಳನ್ನು ನಾಯ್ಕರಿಂದ ಪಡೆದು, ತಾನು ತಂದ ಫೊಟೋವನ್ನು ನಾಯ್ಕರೊಡನೆ ಬಿಟ್ಟು ತೆರಳಿದರು. ಇದೇ ಅವರ ಕೊನೆಯ ಭೇಟಿ.

ಒಂದು ತಿಂಗಳ ನಂತರ, ನಾಯ್ಕರು ಸಂಪದ್ಗಿರಿರಾಯರಿಗೆ ಕಾಗದ ಬರೆದರು. ತನಗೆ ಮಗಳೇ ಇಲ್ಲವೆಂದೂ, ನಾಯ್ಕರ ಪತ್ರವನ್ನು ನೋಡಿ ತಾನು ಆಶ್ಚರ್ಯಪಟ್ಟಿರುವೆನೆಂದೂ, ಗೋವರ್ಧನ ಎಂಬ ಹೆಸರಿನವರನ್ನು ತಾನರಿಯೆನೆಂದೂ ಸಂಪದ್ಗಿರಿರಾಯರಿಂದ ಉತ್ತರ ಬಂತು.

ನಾಯ್ಕರು, ಗೋವರ್ಧನರಾಯರು ತಂದ ಫೋಟೋವನ್ನು ಸಂಪದ್ಗಿರಿರಾಯರಿಗೆ ಕಳುಹಿದರು. ಎರಡು ದಿನಗಳಲ್ಲಿ ಸಂಪದ್ಗಿರಿರಾಯರಿಂದ ಪುನಃ ಉತ್ತರ ಬಂತು:— "ನೀವು ಕಳುಹಿಸಿದ ಫೋಟೋ ನನ್ನ ಮೃತಪತ್ನಿಯದು. ಒಂದು ತಿಂಗಳ ಹಿಂದೆ 'ಶ್ರೀಧರರಾಯ' ಎಂಬ ಹೆಸರಿನವರೊಬ್ಬರು ನನ್ನ ಮನೆಗೆ ಬಂದಿದ್ದರು. ಒಂದು ದಿನ ಉಳ

ಕೊಂಡು, ನನಗೆ ಎರಡನೆ ಸಂಬಂಧವೊಂದನ್ನು ಸೂಚಿಸಿ, "ಉಡುಪಿ ನಾರಾಯಣರಾಯರ ಮಗಳ" ಫೊಟೋ ಎನ್ನುತ್ತ ಒಂದು ಫೊಟೋ ಕೊಟ್ಟರು. ಮರುದಿನ ೫ ರೂಪಾಯಿ ಗಳೊಂದಿಗೆ ಹೋದವರು ಈ ತನಕ ಪತ್ತೆಯಿಲ್ಲ. ಆಗಲೇ ನನ್ನ ಮೃತಪತ್ನಿಯ ಫೊಟೋ ಕಾಣೆಯಾಗಿತ್ತು......" ಎಂದು ಮುಂತಾಗಿ ಬರೆದು, ಆ 'ಶ್ರೀಧರರಾಯ'ರ ರೂಪ ವನ್ನು ಕೊಂಚ ವರ್ಣಿಸಿದ್ದರು.

ರಾಮಚಂದ್ರನಾಯ್ಕರಿಗೆ ಎದೆ ಧಸಕ್ಕೆಂದಿತು. ಒಳ ಗಿನ ಕೊಠಡಿಗೆ ಹೋಗಿ ತಮ್ಮ ಮಗಳ ಫೊಟೋ ಕಡೆಗೆ ನೋಡಿದರು. ಅವರೆಣಿಸಿದುದೇ—**ಫೊಟೋ ಕಾಣೆಯಾಗಿದೆ!**

ಇನ್ನೊಬ್ಬ ವಿವಾಹಾತುರ ವಿದುರನು ರಾಮಚಂದ್ರ ನಾಯ್ಕರಿಗೆ–"ನಿಮ್ಮ ಮಗಳ ಫೊಟೋ ನೋಡಿ ಒಪ್ಪಿಗೆಯಾ ಯಿತು. ಎಷ್ಟು ವರದಕ್ಷಿಣೆ ಕೊಡುವಿರಿ?" ಎಂದು ಪತ್ರ ಬರೆವ ತನಕ ಶ್ರೀಧರ ಯಾನೆ ಗೋವರ್ಧನ ರಾಯರ ಪತ್ತೆ ಮಾಡದೆ ಸುಮ್ಮನೆ ಕುಳಿತುಕೊಳ್ಳುವುದು ತಪ್ಪು— ಎಂದು ಕೊಳ್ಳುತ್ತ ನಾಯ್ಕರು ಪತ್ತೆಗಾರಂಭಿಸಿರುವರು.

ಆದರೆ........!



## ೨. ವೈಶ್ಯವರ್ಗೀಯಾಗುವ ಸುಳ್ಳು.

ರಘುವೀರನು ನನ್ನ ಗೆಳೆಯ. ನಮಗೆ ಪರಿಚಯವಾದುದು ಮೊದಲು ಲೇಖನಿಯಿಂದ. ಅವನು ಸಂಪಾದಕನು. ನಾನು, 'ಸಂಪಾದಕ'ರೆಂಬವರನ್ನು ಪ್ರೀತಿಯಿಂದ ನೋಡುವವನು. "ಹೃದಯರಂಜನ" ಪತ್ರಿಕೆಯನ್ನು ರಘುವೀರನು ಆರಂಭಿಸಿದ ಮೇಲೆ ನಮ್ಮ ಪರಿಚಯವು ಫಕ್ಕನೆ ಉಂಟಾಗಿ, ಕೆಲವೇ ಕಾಲದಲ್ಲಿ ಬಲವಾಯಿತು. ಈಗ ರಘುವೀರನು 'ಸಂಪಾದಕ'ನಲ್ಲ; "ಭೂತಪೂರ್ವ...."ವಾಗಿದ್ದಾನೆ. ಅವನ "ಹೃದಯರಂಜನ"ವು ಹೃದಯಭೇದಕವೆನಿಸುವಂತೆ ಹುಟ್ಟಿದ ದಿನವೇ ಸತ್ತಿತೆಂಬುದು ದುಃಖಪೂರ್ಣವಾದ 'ಬಹಿರಂಗ ರಹಸ್ಯ.'

ನಿಂತು ಹೋಗಲು ಕಾರಣವೇನು?—

(೧) ಕನ್ನಡಿಗರ ಆದರದ ಅಭಾವ (೨) ಆರ್ಥಿಕ ದುರ್ದಶೆ (೩) ಪ್ರಚಾರ ಕಾರ್ಯದ ಅಪೂರ್ಣತೆ (೪) ಪತ್ರಿಕೆಯು ಆಕರ್ಷಕವಾಗಿಲ್ಲದಿರುವುದು,—ಇವು ಒಂದು ಪತ್ರಿಕೆಯ 'ಅಕಾಲ ನಿಧನ'ಕ್ಕೆ ಕಾರಣವೆಂದು ನಿಮ್ಮ ತರ್ಕವಿರಬಹುದು. ಆದರೆ, ರಘುವೀರನ ಪತ್ರಿಕೆಯ ಅವಸಾನವು ಆತನ ದುಂದುವ್ಯಯದಿಂದಲೇ ಉಂಟಾಯಿತು.

ಹೇಗೆ?— ಒಂದು ಉದಾಹರಣೆಯೇ ಇದು.

ಪತ್ರಿಕೆಗೆ ಚಂದಾದಾರರನ್ನು ಕೂಡಿಸಲು ಆತನು ಸರ್ವೋತ್ತಮನೆಂಬವನ ಸಹಾಯ ಪಡೆದನು. ಸರ್ವೋತ್ತಮನು ಸರ್ವ ವಿದ್ಯೆಗಳಲ್ಲೂ ನಿಷ್ಣಾತನು. ಅವನ ನಾಲ

ಗೆಯೂ, ಅದರಂತೆ ಕೈಯೂ ಹರಿತವಾಗಿವೆ. "ಚಂದಾದಾರರನ್ನು ಕೂಡಿಸುತ್ತ ದಣಿವ ಬದಲಾಗಿ ನಿಮ್ಮನ್ನು ಒಂದೇ ಒಂದು ಹತ್ತುರೂಪಾಯಿ ನೋಟಿನಲ್ಲಿ ಭಾಗ್ಯವಂತನನ್ನಾಗಿ ಮಾಡಬಲ್ಲೆ" ಎಂದು ಆತನು ರಘುವೀರನಿಗೆ ಭಾಷೆಕೊಟ್ಟನು. ಹೇಗೆಂದು ರಘುವೀರನು ಪ್ರಶ್ನಿಸಲಾಗಿ, "ತಾಯಿತ! ನನ್ನ ಅಜ್ಜನು. . . . ಲ್ಲಿ ಕಲಿತು ಬಂದು ನನಗೆ ಹೇಳಿಕೊಟ್ಟನು. ಮಹಾರಹಸ್ಯ; ಖಂಡಿತ ಫಲ!" ಎಂದನು.

'ಸುಶಿಕ್ಷಿತ'ನು ರಘುವು; ಒಂದು ಪತ್ರಿಕೆಯ ಸಂಪಾದಕನು; ಆದರೆ ಮನುಷ್ಯನು. ಆದುದರಿಂದ ಸರ್ವೋತ್ತಮನು ತೆಳ್ಳಗಿನ ನಾಲಗೆಯಿಂದಾಡಿದ ಮಾತುಗಳನ್ನು--ತೆಳ್ಳಗಿನ ಕೈಯಿಂದ ಭಾಷೆಯ ಪೆಟ್ಟನ್ನಿತ್ತುದೇ--ನಂಬಿದನು. 'ಸುಶಿಕ್ಷಿತ'ರೆಂಬವರಲ್ಲಿ ಹೆಚ್ಚಿನವರು ತಾಯಿತವನ್ನು ತಾಯಿಗಿಂತ ಹೆಚ್ಚು ನಂಬುವರೆಂಬುದು ನಿಮಗರಿತಿರಬಹುದು.

ರಘುವು ಕುಂದಾಪುರದಲ್ಲಿ ಚಂದಾದಾರರನ್ನು ಕೂಡಿಸುವ ಮಹಾಯತ್ನದಲ್ಲಿದ್ದನು. ಅಲ್ಲಿಗೆ ಸರ್ವೋತ್ತಮನ ಹತ್ತು ರೂಪಾಯಿ ಮೌಲ್ಯದ ವಿ. ಪಿ. ತಲಪಿತು. ಮೌಲ್ಯತೆತ್ತು, ರಘುವು ಅದನ್ನೊಡೆಯಲು ಒಂದು ಉಂಗುರವು ಸಿಕ್ಕಿತು. ಅದನ್ನು ಬೆರಳಿಗೆ ಸಿಕ್ಕಿಸುತ್ತಲೇ ಮೈ ಝುಮ್ಮೆನ್ನುವುದೆಂದೂ, ಆಗಲೇ ಅದರ ಪ್ರಭಾವವು ಆರಂಭವಾಗಿದೆ ಎಂಬ ಲೆಕ್ಕವೆಂದೂ ಸರ್ವೋತ್ತಮನು ಬರೆದಿದ್ದನು. ಇನ್ನಿದನ್ನು ಕೈಗೆ ಸಿಕ್ಕಿಸಿ ಚಂದಾದಾರರನ್ನು ಕೂಡಿಸ ಹೋಗುವೆನೆಂದು ರಘುವು, ಆ ಕೂಡಲೇ ಕೈಗೆ ಸಿಕ್ಕಿಸಿ, ನಡುಗುವ ಹೃದಯದಿಂದ ಮೈಝುಮ್ಮೆನ್ನು ಕಾಯುತ್ತ ಕುಳಿತನು. ಘಂಟೆ—ದಿನ. . . . . . . . . ತಿಂಗಳ ತನಕ ಕಾಯ್ದನು.

ಝುಮ್ಮೇ ಇಲ್ಲ. ವಿಷಾದದ ಸಂಗತಿಯೆಂದರೆ– ಕುಂದಾಪುರದಲ್ಲಿ ಇವನಿಗೆ ಒಬ್ಬನಾದರೂ ಚಂದಾದಾರನು ದೊರೆಯಲಿಲ್ಲ.

ಒಂದು ತಿಂಗಳ ನಂತರ ಸರ್ವೋತ್ತಮನು ಸಿಕ್ಕಲು, ರಘುವು ಕೋಪದಿಂದ ಆತನನ್ನು ಕುರಿತು –"ಏನಯ್ಯಾ— ಈ ಸೀಚತನವೇ?"

ಸರ್ವ— "ಏನು ನೀಚತನ?"

ರಘು — "ಉಂಗುರದ ಜುಮ್ಮು? ಇಲ್ಲವೇ ಇಲ್ಲ!"

ಸರ್ವ – "ನೀನು ಅದನ್ನು ಹೇಗೆ ಕೈಗೆ ಹಾಕಿಕೊಂಡೆ?"

ರಘು—"ಟಪ್ಪಾಲಿನವನ ಕೈಯಿಂದ ಪಡೆದಕೂಡಲೇ."

ಸರ್ವ – "ಆಗ ಊಟಗೀಟವಾಗಿತ್ತೇ?"

ರಘು— "ಇಲ್ಲಪ್ಪಾ— ಸ್ನಾನ ಕೂಡಾ ಆಗಿರಲಿಲ್ಲ."

ಸರ್ವ(ಸಂತೋಷದಿಂದ)–"ಸರಿ! ನಿನ್ನಂತಹ ಮೂರ್ಖನು ನೀನೆ! ಸ್ನಾನ ಮಾಡದೆ ಕೈಬೆರಳಿಗೆ ತಾಯಿತದ ಉಂಗುರವನ್ನು ಹಾಕಿಕೊಳ್ಳುವ ಬ್ರಾಹ್ಮಣರೂ ಇರುವರೇ? ಹತ್ತು ರೂಪಾಯಿಗಳನ್ನು ನೀರಿಗೆ ಹಾಕಿದಿಯಲ್ಲ!"

ರಘುವಿಗೆ (ಆಗ ಕೈಯ್ಯಲ್ಲಿ ಉಂಗುರವಿರಲಿಲ್ಲ.) ಮೈ ಝುಮ್ಮೆಂದಿತು.

ರಘುವಿನ ೧೯೩೩ನೇ ಇಸವಿಯ ಡೈರಿಯನ್ನು ತೆಗೆದು, ದಶಂಬರ ತಿಂಗಳ ಪುಟವೊಂದರಲ್ಲಿ ನೋಡಿರಿ–"ಮೈಝುಮ್ಮಾಗುವ ಸುಳ್ಳಿಗೆ ಕೊಟ್ಟ ಹಣ–ಹತ್ತುರೂಪಾಯಿ" ಎಂದು ಬರೆದಿದೆ.

ಈಗ ವರ್ಷವೇ ಕಳೆದರೂ, ಆ ತಾಯಿತವಿಲ್ಲದೆ ಅವನ ಮೈ ಆಗಾಗ ಇದನ್ನು ನೆನೆದಾಗಲೆಲ್ಲಾ ಝುಮ್ಮೆನ್ನುತ್ತಿದೆ.



# ೩. ನಿಮ್ಮ ಕುರಿತು ಅಭಿಪ್ರಾಯ.

ಸಾಯಂಕಾಲ ಮದರಾಸಿನಿಂದ ಬಂದ ಮ್ಯೆಲ್ ಬಂಡಿಯು ಕಾಸರಗೋಡು ನಿಲ್ದಾಣದಲ್ಲಿ ನಿಲ್ಲುತ್ತಲೇ ಅದನ್ನು ಹತ್ತಿದ ಕೆಲವು ಪ್ರಯಾಣಿಕರಲ್ಲಿ ಅಚ್ಯುತನೂ ಒಬ್ಬ. ಅಚ್ಯುತನೆಂದರೆ—ಮಾತಿನ ಮಲ್ಲ. ಅವನಿಗೆ ಪರಿಚಿತರನ್ನು ಕಂಡರೆ ಮಾತ್ರ ಮಾತು ಬರುವುದಲ್ಲ—ಅಪರಿಚಿತರನ್ನು ಕಂಡರೂ ಆಷಾಢ ಮಾಸದ ಮಳೆಯಂತೆ—ಎಡೆಬಿಡದೆ ಮಾತಾಡುವವನೇ! ಮಾತಾಡುವಾಗ, ಆ ಸಂಭಾಷಣೆಯಲ್ಲಿ ಬರುವ ವ್ಯಕ್ತಿಗಳನ್ನು ಟೀಕಿಸುವನು: ಬಾರದ ವ್ಯಕ್ತಿಗಳನ್ನು ತಾನೇ ತಂದು, ಅವರ ಜೀವನ, ನಡೆ, ನುಡಿ, ಪೋಷಾಕು ಎಲ್ಲವುಗಳ ಮೇಲೆ ಅಭಿಪ್ರಾಯ ಕೊಡುವನು.

ರೈಲು ಹತ್ತುತ್ತಲೇ ಅವನು ಹೋಗಿ ಕುಳಿತುದು ಒಬ್ಬ ಹಳೇ ಮನುಷ್ಯನ ಜತೆಯಲ್ಲಿ. 'ಹಳೇ ಮನುಷ್ಯ'ನೆಂದರೆ—ಕ್ರಾಪ್ ಇಲ್ಲದ, ಆಧುನಿಕ ವಿಧದ ಪೋಷಾಕುಗಳಿಲ್ಲದ,—ಕೇವಲ 'ಶಟ್ ಕೋಟ'ನ್ನು ಹಾಕಿ, ಮುಂಡಾಸಿಟ್ಟು ಅದರ ಎಡೆಯಿಂದ ನರೆತ ಕೂದಲನ್ನು ಪ್ರದರ್ಶಿಸುತ್ತಿರುವ ಹಳಬನೆಂದರ್ಥ.

"ತಾವು ಎಲ್ಲಿಂದ ಬಂದಿರಿ ಸ್ವಾಮಿ?" ಎಂದು ಮೊದಲು ಮಾಡಿದನು ಅಚ್ಯುತ.

ಹಳಬನು ಕೊಂಚ ಬಾಯಿ ಬಿರಿದು—"ಪೊದನೂರಿನಿಂದ!" ಎಂದನು

"ಪೊದನೂರು! . . . . ನಾನು ಆ ಸ್ಟೇಷನನ್ನು ಒಮ್ಮೆ ದಾಟಿದ್ದೇನೆ!" ಎನುತ್ತ ಅಚ್ಯುತನು ತನ್ನ ಮಾತಿನ ಭಾಂಡಾ

ಗಾರವನ್ನು ಅಡಿ ಮೇಲಾಗಿಯೇ ಹಿಡಿದು, ಅದರ ಬಾಯಿ ತೆರೆದನು. ಮಾತುಗಳು ಬಡಬಡನೆ ಉದುರಲಾರಂಭಿಸಿದುವು. ಮಾತನಾಡುತ್ತ, ಮಂಗಳೂರಿನ ಪಂಡಿತ ಶಿವಣ್ಣಯ್ಯನ ವಿಷಯವೂ ಬಂತು

"ಪಂಡಿತ ಶಿವಣ್ಣಯ್ಯ! ಯಾರೋ ಒಬ್ಬ ಹಳಬ ಸ್ವಾಮಿ. ತಾನೊಬ್ಬ ವಿದ್ವಾನನೆಂದು ಗರ್ವ ಆ ಮುದಿ ಗೂಬೆಗೆ! ಚಿಕ್ಕ ಬಾಲಕರು ಬರೆದುದನ್ನೂ, ಬೆಳೆದ ಯೌವನಸ್ಥರು ಪ್ರಕಟಿಸಿದುದನ್ನೂ ದೂರುವುದೇ ಕೆಲಸ! ಪುಣ್ಯಾತ್ಮ ತಾನೊಂದೂ ಪಂಕ್ತಿ ಬರೆದುದಿಲ್ಲ. ನವಕವಿತೆಯೆಂದರೆ, ಬರೆದವರಿಗೇ ಅರ್ಥವಾಗದ, ನಿಷ್ಪ್ರಯೋಜಕವಾದ, ಸಂಗೀತ ವಿಹೀನವಾದ, ಛಂದೋಶಾಸ್ತ್ರದ ಕೊಲೆ ಮಾಡಿ ಅದರ ಬೂದಿಯ ಮೇಲೆ ಕಟ್ಟಲ್ಪಟ್ಟ ಮುರುಕು ಗುಡಿಸಲುಗಳಂತೆ! ಒಮ್ಮೆ ಅವನನ್ನೆ ಕೆಲವರು ಒಂದು ಲೇಖನಕ್ಕಾಗಿ ಒತ್ತಾಯಪಡಿಸಲು,—ಭಾಮಿನಿ ಷಟ್ಪದಿಯಲ್ಲಿ ಎರಡು ಪದ್ಯಗಳನ್ನು ಬರೆದುಕೊಟ್ಟನು; ಜತೆಯಲ್ಲಿ ಒಂದು ಕತೆಯನ್ನು ಕಳುಹಿಸಿ— "ಇದು ಸಣ್ಣ ಕತೆಗೆ ಮಾದರಿ" ಎಂದನು ಓದಿದವರೆಲ್ಲ ನೋಡಿ ನಕ್ಕುಬಿಟ್ಟರು ಸ್ವಾಮಿ! ವಿದ್ವಾನರಾದರೇನು, ಆತನಿಗೆ ಕೆಲವು ಶಬ್ದಗಳು ಹೆಚ್ಚಿಗೆ ಬರಬಹುದು - ಇತರ ಸಾಮಾನ್ಯ ಬರಹಗಾರರಿಗೆ ಕೆಲವು ಕಡಿಮೆ;—ಆದರೆ, ಕೇವಲ ಶಬ್ದ ಭಾಂಡಾಗಾರವು ದೊಡ್ಡದೆಂದು ಚಲೋ ಕಲ್ಪನೆಗಳನ್ನು ತಮಗೆ ತಿಳಿದ ಭಾಷೆಯಲ್ಲಿ ಪ್ರಕಟಿಸುವ ತರುಣರನ್ನು ದೂರುವುದೇ? ಹಾಗೆ ದೂರುವವರು ತಾವೇ "ಮಾದರಿ"ಯೆಂದು ಬರೆದೂ ನಗೆಗೀಡಾಗುವುದೇ? ನನಗೆ ಆ ಶಿವಣ್ಣಯ್ಯ ದೊರೆತರೆ— 'ನೀನಿನ್ನು ಕೇವಲ ವಿದ್ವಾನನೆಂಬ ಬಿರುದನ್ನು ಹಿಡಿದುಕೊಂಡು ತಣ್ಣಗೆ ಮನೆಮೂಲೆಯಲ್ಲಿ ಕುಳಿತು ಮಹಾಭಾರತವನ್ನೋದಿ

ಪುಣ್ಯಗಳಿಸಿಕೊಂಡಿರುವುದೊಳ್ಳಿತೆಂದು ಹೇಳುತಿದ್ದ ಸ್ವಾಮಿ. ಆದರೆ, ಹೋಗಲಿ. ನಮಗೇನು?"

ಹಳಬನು ಇದನ್ನೆಲ್ಲ ಮಂದಸ್ಮಿತದಿಂದ ಕೇಳುತ್ತಲೇ ಇದ್ದನು. ಚಾ-ಚೂ ಎನ್ನಲಿಲ್ಲ. ರೈಲು ಬಂಡಿಯು ಮಂಗಳೂರು ನಿಲ್ದಾಣಕ್ಕೆ ಬಂದು ತಲಪಿತು. ಅಚ್ಯುತನು, ಆ ಹಳಬನೊಂದಿಗೆ ಕೈಗಳಿಯುತ್ತ, "ನಮಸ್ಕಾರ ಸ್ವಾಮಿ. ಹೋಗುತ್ತೇನೆ. ಇನ್ನೊಮ್ಮೆ ಎಲ್ಲಾದರೂ ನಾವು ಭೇಟಿಯಾಗಬಹುದು. ಬಂಡಿಯಲ್ಲಿ ನೀವಿದ್ದುದರಿಂದ ಸಮಯ ಕಳೆದು ಹೋದುದೇ ತಿಳಿಯಲಿಲ್ಲ. . . . . ನಮಸ್ಕಾರ . . . . ನಿಮ್ಮ ಹೆಸರು?"

ಹಳಬನು ನಗುತ್ತ "ನನ್ನ ಹೆಸರು . . . . . ಅಗತ್ಯವಿದೆಯೇ?" ಎಂದು ಕೇಳಿದನು.

"ಹೊಸ ಪರಿಚಯ — ಹೆಸರನ್ನು ತಿಳಿಯದುಂಟೇ"

ಹಳಬನು ತನ್ನ ಕಿಸೆಯಿಂದೊಂದು ಕಾಗದವನ್ನು ತೆಗೆದು, ಪೆನ್ಸಿಲಿನಿಂದ ಅದರ ಮೇಲೆ ತನ್ನ ಹೆಸರನ್ನು ಬರೆದು ಕೊಟ್ಟನು. ಅಚ್ಯುತನು ಓದಿದನು:—

"ಪಂಡಿತ ಶಿವಣ್ಣಯ್ಯ, ವಿದ್ವಾನ್."



## ೪. ಗೆಳೆತನದ ಅಳತೆ.

ಅದನ್ನು ಅಳೆಯಬಹುದೇ? ಅದು ಒಂದು ಪೌಂಟೆನ್ ಪೇನಿಗಿಂತ ಉದ್ದವಿಲ್ಲವೆನ್ನುವವರಿರುವರು. ರಂಗಪ್ಪನೂ ವಾಸುವೂ ಗೆಳೆಯರು. ಅವರ ಗೆಳೆತನವೆಂದರೆ ಊರಲ್ಲೆಲ್ಲ ಹೆಸರಾದುದು. ಇಬ್ಬರೂ ದಿನದ ಇಪ್ಪತ್ತನಾಲ್ಕು ತಾಸು ಗಳಲ್ಲಿಯೂ ಒಟ್ಟಿಗೆ ಇರುವರು. ಒಂದು ದಿನ ವಾಸುವಿಗೆ ರಂಗಪ್ಪನ ಮನೆಯಲ್ಲಿ ಊಟವಾದರ, ಮತ್ತೊಂದು ದಿನ ರಂಗ ಪ್ಪನಿಗೆ ವಾಸುವಿನ ಮನೆಯಲ್ಲಿ. ಇವರ ಸ್ನೇಹವು ಊರಲ್ಲಿ ನಿಜಕ್ಕೂ ಗಾದೆಯ ಮಾತಾಗಿ ಹೋಗಿದೆ.

ಒಂದು ದಿನ ವಾಸುವು ರಂಗಪ್ಪನಿಗೆ ಮೋರಿಪಿಕ್ ಫರ್ಡನ ಚಿತ್ರವಿರುವ ಒಂದು ಪೋಸ್ಟ್‌ಕಾರ್ಡನ್ನು ಪ್ರೇಮ ದಿಂದ, "ಬೇಡದೆ ಕೊಡಲು," ರಂಗಪ್ಪನ ಪ್ರೇಮವು ಇಮ್ಮ ಡಿಯಾಗಿ ಉಕ್ಕಿ, "ವಾಸೂ-ನಮ್ಮ ಸ್ನೇಹವು ಜನ್ಮ ಜನ್ಮಕ್ಕೂ ಕಡಿದುಹೋಗಲಾರದು!" ಎಂದನು.

"ನಾವು ಮುಂದೆ ಎಲ್ಲಿಯಾದರೂ ಹುಳುಗಳಾಗಿ ಹುಟ್ಟಿ ದರೂ ಒಟ್ಟಿಗೇ ಹುಟ್ಟಿ-ಗೆಳೆತನದಿಂದಲೇ ಇರಬೇಕು!" ಎಂ ದನು ವಾಸು.

ಇಬ್ಬರೂ ಹೆಚ್ಚಿಗೇನೂ ಮಾತಾಡಲಾರದಾದರು. ಪ್ರೇಮದಿಂದ ಇಬ್ಬರ ಎದೆಗಳೂ ಉಬ್ಬಿ, ಉಸಿರಿಗೇ ಸ್ಥಳವಿರ ಲಿಲ್ಲ. ಕಂಠಗಳು ಪೂರ್ಣವಾಗಿದ್ದುವು.

ರಂಗಪ್ಪನ ಮನೆಯ ಆಸ್ತಿಯ ಲೆಕ್ಕಗಳನ್ನಿಡುವ ಕರಣೀ ಕನು ರಾಜಪ್ಪ. ಅವನಿಗೆ ರಂಗಪ್ಪನ ತಂದೆಯಿಂದ, ರಂಗಪ್ಪ

ನಿಂದ, ರಂಗಪ್ಪನ ಸಂಬಂಧಿಕರಿಂದ, ಅತ್ತ ಇತ್ತ ಹೋಗು ವಾಗ ತನ್ನನ್ನು ಪರಿಚಯದ ನಗುವಿನಿಂದ ಸನ್ಮಾನಿಸಿದವರಿಂದ ಸಾಲ ಬೇಡುವ ಅಭ್ಯಾಸ. ಅವನು ರಂಗಪ್ಪನ ತಂದೆಯಿಂದ ಪಡೆದ "ಅಡ್ವಾನ್ಸು", ಅವನನ್ನು ಇನ್ನು ಮೂರು ವರ್ಷಗಳ ತನಕ ದುಡಿದು ಸಲ್ಲಿಸಬೇಕಾದ ಋಣಕಂಭಕ್ಕೆ ಬಂಧಿಸಿತ್ತು. ಅದರ ಮೇಲೆ ಅವನು ಮಾಡುತ್ತಿದ್ದುದೆಲ್ಲ "ಸಾಲ." ರಂಗಪ್ಪ ನಿಗೆ ಅವನು ಕೊಡಬೇಕಾಗಿದ್ದುದು ಹನ್ನೆರಡಾಣೆಗಳು!

ರಂಗಪ್ಪನು ಆ ಹನ್ನೆರಡು ಆಣೆಗಳಿಗಾಗಿ ಹನ್ನೆರಡು ಯುಗ (ತಿಂಗಳು;—ತಿಂಗಳನ್ನು ರಂಗಪ್ಪನು, ತನ್ನನ್ಯಾರಾ ದರೂ ದುಃಖಗೊಟ್ಟು ಪೀಡಿಸಿದರೆ 'ಯುಗ'ವೆಂದು ನಾಮಕ ರಣ ಮಾಡುವನು.) ಪೇಚಾಡಿದನು. ಕೊನೆಗೆ, ಉಪಾಯ ಗಾಣದೆ, ರಾಜಪ್ಪನಿಗೆ ಬುದ್ಧಿಗಲಿಸಬೇಕೆಂದು, ಆತನ "ವಾಟ ರ್‌ಮೇನ್" ಪೇನನ್ನು ಮೆಲ್ಲನೆ ಎತ್ತಿಬಿಟ್ಟನು.

"ಭದ್ರವಾಗಿಡು!" ಎನ್ನುತ್ತ ರಂಗಪ್ಪನು, ಅದನ್ನು ವಾಸುವಿನ ಕೈಯಲ್ಲಿ ಕೊಟ್ಟನು. ಗೆಳೆತನದ ಪ್ರಕಾಶವೆಲ್ಲವೂ ವಾಸುವಿನ ಮುಖದ ಮೇಲೆ ಮಿನುಗಿತು.

'ಹಣದ ತಗಾದೆ' ಎನ್ನುತ್ತಿರಲ್ಲ—ಅದು ಹೇಗೆ ಉಂ ಟಾಗುತ್ತದೆ ಎಂಬುದನ್ನು ಹೇಳುವುದು ತೀರ ಅನಾವಶ್ಯಕ. ನೀವೆಲ್ಲರೂ ಅದನ್ನು ಚೆನ್ನಾಗಿ ಬಲ್ಲಿರಿ; ಅನುಭವಿಸಿರುವಿರಿ. ಹೊಟೇಲಿನ ರಾಮಣ್ಣನು ವಾಸುವನ್ನು ಒಂದು ದಿನ ಹಣ ಕ್ಕಾಗಿ ಪೀಡಿಸಲು ವಾಸುವು ದಿಕ್ಕುಗೆಟ್ಟು, ಆ ಫೌಂಟನ್ ಪೇನನ್ನು ರಾಮನಾಯಕನೆಂಬಲ್ಲಿ ಒಂದು ರೂಪಾಯಿಗೆ ಒತ್ತೆ ಇಟ್ಟು, ಸಂಕಷ್ಟದಿಂದ ಪಾರಾದನು. ಅಂದೇ, ರಂಗಪ್ಪನು ಬಂದು, "ವಾಸೂ, ಆ ಫೌಂಟನ್‌ಪೇನ್ ಎಲ್ಲಿದೆ?" ಎಂದನು.

ಇಂತಹ ಸ್ಥಿತಿಯಲ್ಲಿ ನೀವೇನು ಮಾಡುವಿರಿ?

"ಮಿತ್ರಾ!"–ವಾಸುವಿನ ಕಂಠವು ಗದ್ಗದಿತವಾಯಿತು. "ಮಿತ್ರಾ! ಹೇಳಿದರೆ ನೀನು ನಂಬುವಿಯೋ ಇಲ್ಲವೊ! ಕೊಡಿಯಾಲಬೈಲಿನ ಆ ದೊಡ್ಡ ಹಳ್ಳದ ಮೇಲಿನ ಸಂಕವಿಲ್ಲವೇ? ನಿನ್ನೆ ಅದರ ಮೇಲೆ ನಿಂತು ಬಾಗಿ, ನೀರನ್ನು ನೋಡುತಿದ್ದಾಗ . . . . . 'ಕ್ಲಿಪ್ಪು' ಸಿಕ್ಕಿಸಿರಲಿಲ್ಲ ಮಿತ್ರಾ . . . ಅಯ್ಯೋ ದೇವಾ . . . ನೀರಿಗೆ ಬಿದ್ದುದನ್ನು ಒಂದು ತಾಸು ಹುಡುಕಿದರೂ ಸಿಕ್ಕಲಿಲ್ಲ!" ಮಂದಾರ ಪುಷ್ಪವನ್ನು ಕಳಕೊಂಡ ಬಕಾವಲಿಯ ಚರ್ಯೆಗಿಂತಲೂ ಕರುಣಾಜನಕವಾದ ಚರ್ಯೆಯು ವಾಸುವಿನದು!

ರಂಗಪ್ಪನು ತನ್ನ ಕಿಸೆಯಿಂದ ಫೌಂಟನ್‌ಪೇನನ್ನು ವಾಸುವಿನ ಮುಂದೆ ಹಿಡಿದು–ಸ್ಥಿರದೃಷ್ಟಿಯಿಂದ ಅವನನ್ನು ನೋಡುತ್ತ–"ದೇವರು ದೊಡ್ಡವನು; ಮಹಾ ಜಲಧಿಯಿಂದ ಇದನ್ನುದ್ಧರಿಸಿದನು. ರಾಮುನಾಯಕನ ಕೈಯಿಂದ ಇದು ನನಗೆ ಸಿಕ್ಕಿತು. ನಮ್ಮ ಗೆಳೆತನದ ಬೆಲೆ ತಿಳಿಯಿತೇ?"

ವಾಸುವು ಮೌನ!

"ಒಂದು ರೂಪಾಯಿ!"

## ೫. ಅವರ 'ಸರ್ವೀಸು.'

"ಜಿ. ಬಿ." ಕ್ಲಬ್ಬಿನ ಮೂವತ್ತು ಸದಸ್ಯರಿಗೂ ತಮ್ಮ ಫೊಟೋ ತೆಗೆಸಬೇಕೆಂದು, ಒಂದು ವಸಂತ ಋತುವಿನ ರಾತ್ರೆಯಲ್ಲಿ, ಕ್ಲಬ್ಬಿನಲ್ಲಿ ಕುಳಿತು ಐಸ್‌ಕ್ರೀಮನ್ನು ತಿನ್ನುತ್ತಾ, ಆಲೋಚನೆಯಾಯಿತು. ಊರಲ್ಲಿ ಯಾವ ಫೊಟೋಗ್ರಾಫರನು ಅತಿ ಕುಶಲನೆಂಬ ಪ್ರಶ್ನೆ. "ಯೋಶ್ವ" ಎಂದನೊಬ್ಬ; "ಹೈಮನ್ಸ್" ಎಂದನು ಮತ್ತೊಬ್ಬ; "ಫೋನ್ಸ್" ಎಂದನು ಮಗದೊಬ್ಬ; " ಕಪಾಲರಾಯರು " ಎಂದನು ಇನ್ನೊಬ್ಬ. ಚರ್ಚೆ ನಡೆದು ವೋಟು ತೆಗೆಯಲಾಗಿ... ನಿಮಗೆ ಆಶ್ಚರ್ಯವೆನಿಸಬಹುದು—... ಆ ನಾಲ್ವರಲ್ಲಿ ಯಾರನ್ನೂ ಆರಿಸದೆ, ಆಕಸ್ಮಿಕವಾಗಿ ಸಿ. ಏ ಕೋಮಟಿಯವರ ಕಡೆಗೆ ಬಹುಮತವು ವಾಲಿತು! ಮಂಗಳೂರಿಗೆ ಬಂದ ಮೊದಲನೇ ಕೆಮರವನ್ನು ಕೊಂಡುಕೊಂಡವರೇ ಇವರಂತೆ! "ಸರ್ವೀಸು" ಹೆಚ್ಚಾದ ಇವರೇ ಒಳ್ಳೆಯ ಫೊಟೋ ಎತ್ತಬಲ್ಲರೆಂದು ಬಹುಮತವು ನಿರ್ಧರಿಸಿತು

ಮರುದಿನ ಬೆಳಿಗ್ಯೆ ಏಳು ಘಂಟೆಯೊಳಗೆ ಸದಸ್ಯರೆಲ್ಲ ಸಾಲಂಕೃತರಾಗಿ ಹಾಜರಾದರು. ಮೀಸೆಗಳು ಕಾಣಬಾರದೆಂದು ಬೋಳಿಸಿ ಕೊಂಡವನೊಬ್ಬ; ಕ್ರಾಪ್ ಹೊಳೆಯಬೇಕೆಂದು ಅರ್ಧ ಬಾಟಲಿ ವೆಸಲೀನ್ ಹಚ್ಚಿದವನೊಬ್ಬ; ಗಡ್ಡವೇನೂ ತೋರಬಾರದೆಂದು, ಮುಂಜಾನೆ ೪ರಿಂದ ೬ರತನಕ ಪ್ರಯತ್ನಪೂರ್ವಕ ಕ್ಷೌರ ತೆಗೆಸಿದವನೊಬ್ಬ; ಅಳುಮೊಗವು ತೋರಬಾರದೆಂದು, ಕಳೆದ ರಾತ್ರೆಯ ಹೆಂಡತಿಯ

ತೀಕ್ಷ್ಣ ನುಡಿಗಳನ್ನು ಮರೆಯಲೆತ್ನಿಸಿ, ನಗಲು ಸಾಹಸ ಗೊಂಡವನೊಬ್ಬ.

ಫೊಟೋಗ್ರಾಫರ ಕೋಮಟಿಯವರು, ಕೈಝರನ ಗಾಂಭೀರ್ಯವನ್ನು ಜತೆಯಲ್ಲಿ ಕರಕೊಂಡು ಬಂದು, ಕೆಮರ ಏಟ್ಟರು. ಕ್ಲಬ್ ಮೆಂಬರರೆಲ್ಲ ಒಂದು ಮಾವಿನ ಮರದ ಕೆಳಗೆ ಕುಳಿತುಕೊಂಡರು. ಕೋಮಟಿಯವರು ಶಾಲಾ ಅಧ್ಯಾಪಕನಂತೆ, ಅವರೆಲ್ಲರನ್ನೂ ಕ್ರಮವಾಗಿ ಕುಳ್ಳಿರಿಸಿದರು. ಎಂಟರ ತನಕ ಹೀಗೆ ಅವರನ್ನು ದಣಿಸಿ, ಕೊನೆಗೆ "ನಗುತ್ತಿರ್ರಿ!" ಎಂದರು. ಮೆಂಬರರೆಲ್ಲ ಏಕಕಾಲದಲ್ಲಿ, ತಂತಮ್ಮ ಸಂಸಾರ ತಾಪತ್ರಯಗಳನ್ನೆಲ್ಲ ಆ ಒಂದು ಕ್ಷಣಕ್ಕೆ ಮರೆತು, ಕಿಸಕ್ಕೆಂದು ನಕ್ಕರು. ಕೋಮಟಿಯವರು "ಇನ್ನು ನೀವು ಏಳಬಹುದು" ಎಂದು ಅನುಜ್ಞೆಯಿತ್ತು, ಫೋಟೋ ಪ್ರತಿಯೊಂದೊಂದನ್ನು ಒದಗಿಸುವ ಬಗ್ಗೆ ಮೂವತ್ತು ಸದಸ್ಯರಿಂದ ಮೂವತ್ತು ರೂಪಾಯಿಗಳನ್ನು ಪಡಕೊಂಡು, ಗಾಡಿಯಲ್ಲಿ ಕುಳಿತು, ತಮ್ಮ ಮನೆಗೆ ತೆರಳಿದರು.

ವಸಂತಋತುವಿನ ಮೇಲೆ ಎರಡು ಋತುಗಳು ಕಳೆದುವು: ಛಳಿಗಾಲ ಬಂತು. ಕೋಮಟಿಗಳು ಫೋಟೋ ಪ್ರತಿಗಳನ್ನು ಇನ್ನೂ ತಯಾರಿಸುತ್ತಲೇ ಇದ್ದರು. ಬೇಸರ ಹುಟ್ಟಿ ನಾನು . . . .

ಹಣ ಕೊಟ್ಟವರಲ್ಲಿ ನಾನೂ ಒಬ್ಬನು!

. . . .ನಾನು ಅವರ ಮನೆ ತನಕವೂ ಪ್ರಯಾಣ ಬೆಳೆಸಿ ಕೇಳಿದೆ:— "ಕೋಮಟಿಯವರೇ. ಹೇಗೆ ಬಂದಿದೆ ನಮ್ಮ ಫೋಟೋ? ಪ್ರತಿಗಳು ಸಿದ್ಧವಾಗಿವೆಯೇ?"

ಕೋಮಟಿಯವರು ತಮ್ಮ ದೀರ್ಘಕಾಲದ ಸರ್ವಿಸಿನ ಮುಖವನ್ನು ಅವರೇಕಾಳಿನಷ್ಟು ಸಣ್ಣದು ಮಾಡಿ ಒಂದು ಪಂಕ್ತಿಯನ್ನು ಪ್ರಯತ್ನಪೂರ್ವಕವಾಗಿ ಉಸಿರಿದರು:— "ಸ್ವಾಮಿ, ಕ್ಷಮಿಸಿರಿ; ಆ ದಿನ ನಾನು ಕೆಮರದೊಳಗೆ ಪ್ಲೇಟನ್ನಿಡಲು ಮರೆತಿದ್ದೆನು. ಇನ್ನೊಮ್ಮೆ ಅತ್ತ ಬರಲು ನಾಚಿಕೆಯಾಯಿತು! ನಿಮ್ಮ ಫೋಟೋವನ್ನು ತೆಗೆಯಲೇ ಇಲ್ಲ!!"



# ೬. ಕಾಣದ ಕೈ.

ಕತೆಗಾರರು ಯಶಸ್ವಿ ಪತ್ರಿಕಾ ಲೇಖಕರಾಗರೆಂದು ಯಾರೋ ನುಡಿದ ನೆನಪಿದೆ. ಅದರಲ್ಲಿ ಸತ್ಯವಿದ್ದಿರಬೇಕು.

ನಾನು ಕತೆಗಾರನಂತೆ. ಹಾಗೆಂದು ಜನರು ಹೇಳುವರು. ಜನರು ಒಗ್ಗಟ್ಟಾಗಿ ಇಟ್ಟ ಹೆಸರು, ತೊಟ್ಟಿಲಿನಲ್ಲಿ ತಂದೆ-ತಾಯ್ಗಳು ಇರಿಸಿದ ಹೆಸರಿಗಿಂತ ಬಲವುಳ್ಳದು. "ಜನಾಭಿಪ್ರಾಯ"ವೆನ್ನುತ್ತಲೇ— ನೀವದನ್ನು ವಿರೋಧಿಸಲಾರಿರಿ.

ಕತೆಗಾರನಾಗಿಯೂ ನಾನು "ಜ್ಞಾನಸಿಂಧು" ಪತ್ರಿಕಾಲಯದಲ್ಲಿ ಪರಿಚಯವುಳ್ಳವನು. "ಸುಬ್ರಾವ್, ಐ. ಸಿ. ಎಸ್. ಇವರ ವಿವಾಹದ ಕುರಿತು ನಿಮಗೆ ತಿಳಿದುದೆಲ್ಲವನ್ನೂ ವಿವರಿಸಿ, ನಮ್ಮ ಪತ್ರಿಕೆಗೊಂದು ಬಾತ್ಮಿ ಒರೆದುಬಿಡಿ!" ಎಂದು ಸಂಪಾದಕರು ವಿನಂತಿಸಿದರು.

ಲೇಖನಿಯನ್ನೆತ್ತಿ, 'ಕರಿಮಣಿ' ಎಂಬ ನೂತನ ಶಾಯಿ ಕುಪ್ಪಿಯಲ್ಲಿ ಮುಳುಗಿಸಿ, ಬರೆಯಲಾರಂಭಿಸಿದೆ.

" . ಎಸ್ , ಇವರ ಮುಖವು ದುಷ್ಯಂತನ ತೇಜವನ್ನು ಪಡೆದು, ಆ ಅಭಿನವ ಶಾಕುಂತಲೆಯು ಪೂರ್ಣಿಮಾಚಂದ್ರ ಸದೃಶವಾದ . .'

"ಕ್ಷಮಿಸಿರಿ; ನೀವು ಹೇಳುವ ಆ ಅಭಿನವ ಶಾಕುಂತಲೆ (ವಧು)ಯು ಮುಖಕ್ಕೆ ನೀಲಗಿರಿ ಅಥವಾ ಬಾಬಾಬುಡನ್ ಗಿರಿ—ಅಥವಾ ಇನ್ನಾವುದಾದರೂ ಗಿರಿಯ ಸ್ನೋವನ್ನು ತಿಕ್ಕಿರಬಹುದು. ಆಕೆಯ ಮುಖದ ಮೇಲೆ ಕಲೆಗಳಿರಲಿಲ್ಲ!" ಎಂದರು ಸಂಪಾದಕರು.

'ಪೂರ್ಣಿಮಾಚಂದ್ರ'ನೆಂಬುದನ್ನು ಅಳಿಸಿದೆ. ಆ ಮೇಲೆ

ಕೆನೆಹಾಲಿನಂತೆ ಶುಭ್ರವಾದ ಮೊಗಕ್ಕೆದುರಾಗಿ ಆ ಮಂಟಪದಲ್ಲಿ ಶೋಭಿಸುತ್ತಿತ್ತು. ಶೋಕಭಾರದಿಂದ, ಕಂದಿದ ತಾವರೆಯಂತೆ, ವಧುವಿನ ಮಾತೃವು, ಕಣ್ವನಂತೆ ತೇಜಪುಂಜವಾದ ಶರೀರಕಾಂತಿಯುಳ್ಳ. ."

ಈ ರೀತಿಯಾಗಿ ಬರೆದೆ. ಮುಕ್ಕಾಲು ತಾಂವು ಬರೆದೆ. ಬರೆದು ಮುಗಿಸಬೇಕಾದರೆ ಏಳು ಕಾಗದಗಳಲ್ಲಿ ತಿದ್ದಿದೆ. ಎಂಟನೆ ಪ್ರತಿಯನ್ನು ಶುದ್ಧವಾಗಿ ಬರೆದು, ಸಂಪಾದಕರ ಕೈಗೆ ಒಪ್ಪಿಸಿದೆ. ಪತ್ರಿಕಾ ವ್ಯವಸಾಯವು ನಿಜವಾಗಿಯೂ ನಾವೆಣಿಸಿದಷ್ಟು ಸುಲಭವಲ್ಲ.

ಸಂಪಾದಕರು ಅದನ್ನು ಕೈಗೆ ತೆಗೆದುಕೊಂಡು, ತಮ್ಮ ದೃಷ್ಟಿ ಹೊರಳಿಸಿ, ನಗುತ್ತ ನನಗೆ ವಿದಾಯವಿತ್ತರು. ಬರೆಹಗಾರರನ್ನು ಪರೀಕ್ಷಿಸುವುದೇ ಈ ಸಂಪಾದಕರುಗಳ ದುರ್ಬುದ್ಧಿ—ನಾನು ಮಾತ್ರ ಜಯಶೀಲನಾದೆನಲ್ಲವೇ—ಎಂಬ ಸಂತೋಷದಿಂದ ತೆರಳಿದೆ.

ತಾ. 17-3-1934ರ "ಜ್ಞಾನಸಿಂಧು"ವನ್ನು ತೆರೆದು ನೋಡಿದಾಗ, ನಾನು ಬರೆದುಕೊಟ್ಟ ಮುಕ್ಕಾಲು ತಾಂವು ಬರೆಹವು ಐದು ಪಂಕ್ತಿಗಳಲ್ಲಿ ಈ ಕೆಳಗಿನಂತೆ ರೂಪಾಂತರ ಹೊಂದಿ ಪ್ರಕಟವಾಗಿತ್ತು:—

"ಐ. ಸಿ ಎಸ್. ದುಷ್ಯಂತತೇಜ, ಇವರು ಅಭಿನವ ಶಾಕುಂತಲೆ ಎಂಬ ಕೆನೆಹಾಲಿನವಳನ್ನು ಶೇಕದಾರ್ ಕಂದಿತಾವರ್ ಮತ್ತು ಕಣ್ವನಾಥ ಎಂಬವರ ಸಮಕ್ಷಮ, ಇದೇ ಕಳೆದ ತಾ. 14ರಲ್ಲಿ ವಿವಾಹವಾದರು. ನಮ್ಮ ಜಿಲ್ಲೆಯಲ್ಲಿ ನಡೆದ ಈ ಏಳನೆಯ ಅಂತರ್ಜಾತೀಯ ವಿವಾಹವು ಇತರರೆಲ್ಲರಿಗೆ ಆದರ್ಶವಾಗಿದೆ!"

ಇದು ಯಾರ ಕೈಯಾಗಿರಬಹುದು?–ಯಾರು ಒಲ್ಲ!–ಕಾಣದ ಕೈ!

“ಕತೆಗಾರರು ಪತ್ರಿಕಾವ್ಯವಸಾಯವನ್ನು ತಿಳಿಯದು ದಷ್ಟೆ—ಪತ್ರಿಕಾ ವ್ಯವಸಾಯಿಗಳು ಕಥಾಲೇಖನವನ್ನು ಅರಿಯರು. ದಯಮಾಡಿ ನೀವು ಕಳೆದ ಸಂಚಿಕೆಯಲ್ಲಿ ಪ್ರಕಟಿಸಿದ ಆ ಭಯಂಕರ ವಾರ್ತೆಯನ್ನು ತಿದ್ದಿ ಬಿಡಿರಿ” ಎಂದು ಸಂಪಾದಕರಿಗೆ ಪತ್ರ ಬರೆದರೆ, ಉತ್ತರವೂ ಇಲ್ಲ, ತಿದ್ದುಪಡಿ ಪ್ರಕಟವಾದುದೂ ಇಲ್ಲ.

ಬಹುಶಃ “ಸಂಪಾದಕರ ತೀರ್ಮಾನವೇ ಕೊನೆಯದು.”

ಆಶ್ಚರ್ಯವೆಂದರೆ,—ದುಷ್ಯಂತ ತೇಜ ಐ. ಸಿ. ಎಸ್. ಎಂಬವನೊಬ್ಬನು ಅಭಿನವ ಶಕುಂತಲೆ ನಾಮಾಂಕಿತ ಕೆಸೆ ಹಾಲಿ ಎಂಬ ಗ್ರಾಮಸ್ಥಳನ್ನು ಶೇಕದಾರ್ ಕಂದಿತಾವರ್ ಮತ್ತು ಕಣ್ವನಾಥ ಎಂಬ ಹೆಸರಿನ ಮಹನೀಯರ ಸಮಕ್ಷಮ ವಿವಾಹವಾದುದು ನಿಜವೆಂದು,— ನಮ್ಮೂರಿನ ಜನರೆಲ್ಲರೂ ಇಂದಿಗೂ ನಂಬಿರುವರು!



## ೭. ಮಾಟಗಾರ ಸುಬ್ಬ.

ಸುಬ್ಬನು "ಸುಗುಣಗಂಭೀರ." ಜನರನ್ನುತಿದ್ದರು—"ಹೆಂಡತಿಯನ್ನು ಅಂಕೆಯಲ್ಲಿಟ್ಟು ಆಳುವುದನ್ನು ಸುಬ್ಬನಿಂದಲೇ ಕಲಿಯಬೇಕು" ಎಂದು. ನಿಜಕ್ಕೂ ಅಹುದು. ಸುಬ್ಬನ ಮೊದಲನೆ ಮಡದಿಯು ಆ ಗಾಂಭೀರ್ಯದ ಪ್ರಖರತೆಗೆ ಸುಟ್ಟು ಭಸ್ಮವಾಗಿದ್ದಳು. ದ್ವಿತೀಯ ಪತ್ನಿಯು—ಸುಂದರಿ—ಕ್ಷಯದ ಮೆಟ್ಟಲಲ್ಲಿ ನಿಂತು, ಮೃತ್ಯುಮಂದಿರದೊಳಗೆ ಇಣಿಕುತಿದ್ದಳು.

ಆಕೆಗೊಂದು ಮಗು ಹುಟ್ಟಿತು!

ನಿತ್ಯರೋಗೀ ಸ್ತ್ರೀಗೆ ತವರುಮನೆಗಿಂತ ಉತ್ತಮವಾದ ಆಸ್ಪತ್ರೆಯಿಲ್ಲ. ಸುಗುಣಗಂಭೀರ ಸುಬ್ಬನು ಇದನ್ನು ಬಲ್ಲಷ್ಟು ಚೆನ್ನಾಗಿ ಮತ್ತಾರೂ ಅರಿಯರು. "ಉತ್ತಮವಾದ ಹವೆಯ ಸುಖಪಡೆದು, ಆರೋಗ್ಯ ಹೊಂದುತ್ತಿರು" ಎಂದು ಹರಸಿ, ಆಕೆಯನ್ನು ಪುತ್ತೂರಿಗೆ, ತವರುಮನೆಗೆ, ಕಳುಹಿಸಿಕೊಟ್ಟು ಒಂದು ನಿಟ್ಟುಸಿರು ಬಿಟ್ಟನು:—

"ನಿತ್ಯರೋಗೀ ಹೆಂಡತಿಯಿಂದ ಗಂಡನಿಗೇನು ಪ್ರಯೋಜನ?"

ಅದೊಂದು ಪ್ರಶ್ನೆಯಲ್ಲಿ ಜಗತ್ತೇ ಅಡಕವಾಗಿತ್ತು. ಸುಜ್ಞಾನಿಗಳಾದ ನೀವೆಲ್ಲರೂ ಅದನ್ನು ಚೆನ್ನಾಗಿ ಬಲ್ಲಿರಿ.

ಸುಂದರಿಯ ತವರುಮನೆಯ ನೆರೆಕರೆಯವರು ಆಕೆಯ ಪತಿಗೃಹದ ಸೌಭಾಗ್ಯವನ್ನು ಹೊಗಳುತ್ತ, ಒಳಗಿಂದೊಳಗೆ ಮತ್ಸರಪಡೆಯುತ್ತಿರುವಾಗ, ಇತ್ತ ಕಾರ್ಕಳದ ನಾರಾಯಣ ಕಾಮತರು ಸುಬ್ಬನ ಸುದೀರ್ಘ ಪತ್ರವೊಂದನ್ನು ಪಡೆದು ಓದಿದರು:—

"ಸುಬ್ಬನ ನಮಸ್ಕಾರಗಳು. ನಾನು ನನ್ನ ದ್ವಿತೀಯಪತ್ನಿಯ ಸಂಬಂಧವನ್ನು ತೊರೆಯಬೇಕಾಗಿ ಬಂದಿದೆ. ಕಾರಣಗಳಿವೆ. ಈಗ ಹೇಳಲಾರೆ. ನಾನು ತೃತೀಯ ಸಂಬಂಧವನ್ನು ಮಾಡಿಕೊಳ್ಳಲು ಸಿದ್ಧನಿದ್ದೇನೆ. ಒಳ್ಳೇ ರೂಪವತಿ ಹೆಣ್ಣೊಂದನ್ನು-ಸುದೃಢಕಾಯದ-ಸುಗುಣದ-ಕನ್ನಿಕೆಯನ್ನು, ಬಯಸುತ್ತೇನೆ. ಕಾರ್ಕಳದಲ್ಲಿ ತಮ್ಮ ಪರಿಚಯದವರಾರಾದರೂ ಇದ್ದರೆ ತಿಳಿಸಿರಿ. ವರದಕ್ಷಿಣೆಯನ್ನು ಬಯಸುವವನಲ್ಲ "

ನಾರಾಯಣ ಕಾಮತರು ತಮ್ಮ ಅಂಗಡಿಯ ಎದುರಿನ ಮನೆಯಕಡೆ ನೋಡಿದರು. ಬಳಕುವ ಜವ್ವನೆ ನೀಲೆಯು, ಕಿಟಕಿಯ ಬಳಿ ಕುಳಿತು, ಯೋಚನಾನಿಮಗ್ನಳಾಗಿದ್ದಳು. ಸುಬ್ಬನಿಗೆ ಈ ನೀಲೆಯನ್ನು ಕೊಟ್ಟರಾಗದೇ?

"ಬಡವೆ; ಪ್ರಾಪ್ತವಯಸ್ಕಳು!" ಎಂದು ತಮ್ಮೊಳಗೆ ಆಡಿಕೊಳ್ಳುತ್ತ, ನಾರಾಯಣಕಾಮತರು, ಅಂಗಡಿಯನ್ನು ಪರಮಾತ್ಮನ ರಕ್ಷಣೆಗೆ ತೊರೆದು, ಕೆಳಗಿಳಿದು, ನೀಲೆಯ ಮನೆಯನ್ನು ಪ್ರವೇಶಿಸಿ, ಆಕೆಯ ತಾಯಿಯನ್ನು ಕರೆದು, ಪತ್ರದ ಅಭಿಪ್ರಾಯವನ್ನು ತಿಳಿಸಿದರು. ನೀಲೆಯ ತಾಯಿ ಸಂತೋಷದಿಂದ ಒಪ್ಪಿಕೊಂಡಳು.

ಮರುದಿನದ ಟಪ್ಪಾಲಿನಲ್ಲಿ ಸುಬ್ಬನು ಈ ಸಾರಾಂಶವನ್ನುಳ್ಳ ಪತ್ರವನ್ನು ಪಡೆದು, ಓದಿದನು: —

". . . ಹುಡುಗಿಯ ಹೆಸರು ನೀಲೆ ಸುರೂಪಿ; ಸುಶಿಕ್ಷಿತೆ; ಸುದೃಢೆ; ಸುಗುಣೆ."

ಸುಗುಣಗಂಭೀರ ಸುಬ್ಬನು ಉಬ್ಬಿದನು. "ರೋಗರತ್ನ ಸುಂದರಿಯಿನ್ನು ಪುತ್ತೂರಿನ ವೈದ್ಯರತ್ನಗಳ ಆರೈಕೆಯಲ್ಲಿರಲಿ!" ಎಂದು, ದೂರದಿಂದ ತನ್ನ ದ್ವಿತೀಯ ಪತ್ನಿಯನಪ್ಪಿ ಹರಸಿದನು. ತೃತೀಯ ಪತ್ನಿಯ ಸಿದ್ಧತೆಗಾಗಿ ತನ್ನ ಕಿಸೆಯಿ..

ಬಹು ಮೌಲ್ಯದ ಫೌಂಟನ್ ಪೆನ್ನನ್ನು ತೆಗೆದು, ಕಾರ್ಕಳ ನಾರಾಯಣಕಾಮತರಿಗೆ ತನ್ನ ಗಾಂಭೀರ್ಯಕ್ಕೊಪ್ಪುವ ಉತ್ತರ ವನ್ನು ಬರೆದನು.

ಟಪ್ಪಾಲು ಇಲಾಖೆಯ ಒಂದು ಲಕ್ಷಣೀಯ ವಿಚಿತ್ರ ವೆಂದರೆ,—ಕೆಲವು ಪತ್ರಗಳು ಸಕಾಲದಲ್ಲಿ ಖಂಡಿತವಾಗಿ ತಲಪುವುವು! ಅಂತಹ ಭಾಗ್ಯಶಾಲಿ ಪತ್ರಗಳಲ್ಲಿ ಸುಬ್ಬಣ್ಣ ನದೂ ಒಂದು!

ನಾರಾಯಣಕಾಮತರಿಗೆ, ಅಂಚೆಯವನನ್ನು ನೋಡಿದ ಕೂಡಲೇ ಎದೆ ಝಲ್ಲೆನಿಸುವಂತಹ ಆನಂದಲಹರಿಯ ಅನು ಭವವಾಗಲಿಲ್ಲವಾದರೂ ಕುತೂಹಲವು ನಿಜವಾಗಿಯೂ ವಿಶೇಷವಾಗಿತ್ತು. ಅಂಚೆಯವನು ಪತ್ರವನ್ನು ಅವರ ಕೈಗೆ ಕೊಡುವ ಮೊದಲೇ, ಇವರೇ ಕಿತ್ತುಕೊಂಡು,—ಗಲ್ಲಿಗೇರಿ ಸಲು ಪಾಶಿಕಂಭದ ಕೆಳಗೆ ನಿಲ್ಲಿಸಲ್ಪಟ್ಟಿರುವವನ ಬಳಿಗೆ ಬಂಧ ವಿಮೋಚನೆಯ ಹುಕುಮಿನ ಪತ್ರವನ್ನು ಒಯ್ಯುವವನ ವೇಗದಿಂದ ಉನ್ಮಾದನಂತೆ ಓಡಿ,—ಪತ್ರವನ್ನು ನೀಲೆಯ ತಾಯಿಯ ಕೈಗೆ ಇತ್ತು,—ಪರೋಪಕಾರಮಾಡಿದ ಚರ್ಯೆ ಯಿಂದ ಮುಖವರಳಿಸಿದರು.

ನೀಲೆಯ ತಾಯಿಯು ಸುಗುಣಗಂಭೀರ ಸುಬ್ಬನ ಪತ್ರ ವನ್ನೊಡೆದು ಓದಿದಳು:—

"ಸಂತೋಷವಾಯಿತು; ಒಪ್ಪಿದೆ. ಆದರೆ,—**ಹುಡು ಗಿಯು, ಮುಂದೆ ನಾನು ಹೇಳಿದಂತೆ ಕೇಳದಿದ್ದರೆ ಮಾಟ ಮಾಡಿ ಕೊಲ್ಲಿಸ್ಯೇನು!** . . . . . ." ಏನಿದು!—ನೀಲೆಯ ತಾಯಿಯು ಮುಂದೆ ಓದಲಿಲ್ಲ. ಆಶ್ಚರ್ಯ—ಕ್ರೋಧ— ದುಃಖಗಳಿಂದ ಅಂಧೆಯಾದಳು. ಆಕೆಯ ಮನೋಮಂದಿರ

ಗಳಿಲ್ಲ ಅವೆರಡು ಶಬ್ದಗಳಿಂದ ಒಡೆದು ಚೂರಾದುವು. ಒಲೆಯ ಬಳಿಯಲ್ಲೇ ಕುಳಿತಿದ್ದಳಾದ ಕಾರಣ, ದೂರಕ್ಕೆ ನಡೆದು ಹೋಗಬೇಕಾದ ಶ್ರಮವೇನೂ ಇಲ್ಲದೆ, ಅದನ್ನು ಆಗಲೇ ಒಲೆಗೆ ಬಿಸುಡಿ, ಅದನ್ನು ಹಿಡಿದಿದ್ದ ಕೈಬೆರಳುಗಳನ್ನು ಒಂದು ಕ್ಷಣ ಬೆಂಕಿಯಮೇಲೆ ಹಿಡಿದು, ಮಾಟದ "ಅಣು"ಗಳಾವುವಾದರೂ ಇದ್ದಿದ್ದರೆ—ಅವುಗಳನ್ನು ನಾಶಪಡಿಸಿ, ಪರಿಶುದ್ಧಳಾಗಿ, ಸುಗುಣಗಂಭೀರನಿಗೆ ತಾನೇ ಪತ್ರ ಬರೆದಳು.

ಮರುದಿನದ ಟಪ್ಪಾಲಿನವನನ್ನು ದಾರಿಯಲ್ಲಿ ಹೊಂಚು ಹಾಕಿ ಸುಗುಣಗಂಭೀರ ಸುಬ್ಬನು, ಆತನಿಂದ ಪತ್ರಪಡೆದು ಓದಿದನು. ಮೊದಲು ಓದಿದುದು ತನ್ನ ವಿಳಾಸವನ್ನು. ಹೀಗಿತ್ತು:—

"ಮಾಟಗಾರ ಸುಬ್ಬನಿಗೆ. . . . . ."

ಮಾಟಗಾರ ಸುಬ್ಬ?—ಎಂಥ ಹೆಸರು!

ಆ ಮೇಲೆ, ಪತ್ರದೊಳಗಿನ ಪಂಕ್ತಿಗಳು ಇವಿಷ್ಟು:—

"ನಿಮಗೆ ಮಾಟಮಾಡಿಸುವ ಶಕ್ತಿಯಿದೆಯೆಂದು ತಿಳಿಯಲು ಆನಂದವಾಗುತ್ತದೆ. ಮಾಟಮಾಡಿಸುವ ಬಗ್ಗೆ ನಿಮಗೆ ಹೆಣ್ಣು ಬೇಕಾಗಿದ್ದರೆ ಜಪಾನ್ ಗೊಂಬೆಗಳ ಅಂಗಡಿಗಾರರಿಗೆ ಬರೆದು ತರಿಸಿ, ಅವುಗಳ ಮೇಲೆ ನಿಮ್ಮ ಶಕ್ತಿಯನ್ನು ಉಪಯೋಗಿಸಿರಿ."

ಸುಬ್ಬನನ್ನೀಗ ನಾವೆಲ್ಲ "ಮಾಟಗಾರ ಸುಬ್ಬ"ನೆಂದು ಕರೆಯುತ್ತಿರುವೆವು. "ಮಾಟ" ಮತ್ತು "ಜಪಾನಗೊಂಬೆ" ಎನ್ನುತ್ತಲೇ ಸುಬ್ಬನು ಕೋಪದಿಂದ ಮೂರ್ಛೆಹೋಗುವನು.



# ೮. ಗೋಂದನ ಬಾಳೆಗೊನೆ.

ಪ್ರಥಮ ಪ್ರಣಯದ ಸುಖಾಗಮನದಿಂದ ಆನಂದಪರವಶವಾಗುವಂತೆ, ನಮ್ಮೂರಿಗೆ ವಿದ್ಯುದ್ದೀಪಗಳು ಬರುವುವೆಂಬುದನ್ನು ಕೇಳಿದಕೂಡಲೇ ಊರಿಗೆ ಊರೇ ಒಂದು ವಿಧದ ಸಂತೋಷಾತಿರೇಕದಿಂದ ಕುಣಿದಾಡಿತು. ಆ ಉನ್ಮಾದದ ಕುಣಿದಾಟದಲ್ಲಿ ಎಲ್ಲೆಲ್ಲಿ ಏನೇನು ಜಾರಿಹೋಗಿ ಯಾರಿಗೆ ಎಂತಹ ನಷ್ಟವಾಯಿತೋ— ಅದನ್ನು ಎಣಿಕೆಮಾಡಿದವರಾರೂ ಇಲ್ಲ. ಆದರೆ, ಗೋಂದನ ಮನೆಯ ಬಾಳೆಗೊನೆಯೊಂದು ಖಂಡಿತವಾಗಿ ಹೋಯಿತು. ಆ ಘಟನೆಯನ್ನು ಗೋಂದನು ಇನ್ನೂ ಮರೆತಿಲ್ಲ.

ಕೆಲಸಗಾರರು ಗೋಂದನ ಮನೆಮುಂದೆ ರಸ್ತೆಯಲ್ಲಿ ವಿದ್ಯುತ್ ಕಂಭವನ್ನು ನೆಟ್ಟು, ತಂತಿಹಾಕುತಿದ್ದರು. ಗೋಂದನು ಹರ್ಷಚಿತ್ತನಾಗಿ ನೋಡುತಿದ್ದನು.

ಒಬ್ಬ ಕೆಲಸಗಾರನು ಗೋಂದನ ಬಳಿಗೆ ಬಂದು, "ಸ್ವಾಮಿ, ರಸ್ತೆಯಲ್ಲಿ ಹೆಚ್ಚು ಸ್ಥಳವಿಲ್ಲ. ಆ ಕಂಭದ ಮೇಲಿಂದ ತಂತಿಯನ್ನು ಎಳೆದು ಕಟ್ಟುವಾಗ ಕಂಭವು ಅತ್ತಿತ್ತ ವಾಲದಂತೆ ಅದಕ್ಕೆ ಹಗ್ಗವನ್ನು ಬಿಗಿದು, ದೂರದಿಂದ ಇಬ್ಬರು ಎಳೆದು ಹಿಡಿಯಬೇಕಾಗಿದೆ. ನಿಮ್ಮ ಹಿತ್ತಲಿಗೆ ಬರಬಹುದಷ್ಟೆ?" ಎಂದನು.

ವೆಚ್ಚವಿಲ್ಲದ ಪರೋಪಕಾರ! 'ಆಗಲಿ' ಎಂದನು ಗೋಂದ.

ಆಯಿತು! —

"ಏನಾಯಿತು?" ಎಂದು ನೀವು ಕೇಳಬಹುದು.

ಆದುದಿಷ್ಟೆ,—ಮರುದಿನ ಗೋಂದನು ಬೆಳಗ್ಗೆ ಎದ್ದು ಹಿತ್ತಲಿಗೆ ಹೋಗಿ ನೋಡಿದಾಗ, ಪೂರ್ಣವಾಗಿ ಬೆಳೆದಿದ್ದ ಒಂದು ರಸಬಾಳೆಹಣ್ಣಿನ ದೊಡ್ಡ ಗೊನೆಯು ಕಾಣೆಯಾಗಿದೆ!

"ಈ ತಂತೀಮಕ್ಕಳೇ ಕದ್ದೊಯ್ದರು!" ಎಂದನು ಗೋಂದ.

"ಛೀ—ಏನುಮಾತು! ಅವರ ಮುಖವನ್ನು ನಾನು ನೋಡಿದ್ದೇನೆ,—ಪ್ರಾಮಾಣಿಕರು!" ಎಂದಳು ಆತನ ಅಜ್ಜಿ.

"ಆದರೆ, ಅವರು ಮುಖದಿಂದ ಅದನ್ನೊಯ್ಯಲಿಲ್ಲ!" ಎಂದನು ಗೋಂದ.

"ಅವರ ಮೇಲೇಕೆ ಅಪವಾದ? ರಾತ್ರಿಕಾಲದಲ್ಲಿ ಯಾರಾದರೂ ಕಳ್ಳರು ಬಂದು ಕೊಂಡೊಯ್ದರೋ ಏನೊ!" ಎಂದು ಅಜ್ಜಿಯ ವಾದ.

ನಿಜ!

"ಗೊನೆ—ಗೊನೆ—ಗೊನೆ—ಗೊನೆ" ಎಂದೇ ತಲೆಯಲ್ಲಿ ಕಟ ಕಟ ಹೊಡೆದಂತಾಗಿತ್ತು. ಅಷ್ಟು ದೊಡ್ಡ ಗೊನೆ ಗೋಂದನ ಹಿತ್ತಲಲ್ಲಿ ಹಿಂದೆಂದೂ ಬೆಳೆದುದನ್ನು ಆತನು ನೋಡಿರಲಿಲ್ಲ.

ಗೋಂದನ ಅಜ್ಜಿಯು ಅದನ್ನು ಕಡಿಯಬೇಕೆಂದರೂ ಕೇಳದೆ, "ಇನ್ನೆರಡು ದಿನ ಬಾಳೆಯಲ್ಲೇ ಇರಲಿ" ಎಂದಿದ್ದನು. ಈಗ ಗೊನೆ ಗೊನೆ ಎಂದು ಮರಮರ ಮರುಗಿದನು:— ಆದರೆ, ಗೊನೆ ಗೊನೆ ಎಂದು ಕೆಲಸಾರಿ ಬಾಯಲ್ಲಿ ಉಚ್ಚರಿಸಿದ ಕೂಡಲೇ ಗೊನೆ ಹುಟ್ಟಿ ನಮ್ಮ ಮುಂದೆ ಬಂದು ನಿಲ್ಲಿದೆಂಬುದು, ಗೊನೆಯನ್ನು ಹಿಂದೆ ಎಂದಾದರೂ ಕಳಕೊಂಡಿರಬಹುದಾದವರ ಅನುಭವ.

ಅಪರಾಹ್ನ ಎರಡು ಗಂಟೆಯ ಬಿಸಿಲನ್ನು ಲಕ್ಷಿಸದೆ ನಮ್ಮೂರ ಸಂತೆಯನ್ನು ಪ್ರವೇಶಿಸಿ, ಬದನೆಯನ್ನು ಹಿಡಕೊಂಡು ಕುಳತಿದ್ದಾಕೆಯೊಬ್ಬಳ ಮುಂದೆ ನಿಂತು, "ಗೊನೆ!" ಎಂದನು ಗೋಂದ.

ಆಕೆ ಆಶ್ಚರ್ಯದಿಂದ "ಯಾವ ಗೊನೆ?" ಎಂದಳು

ತಪ್ಪಿಬ್ಬಾಗಿ "ಅಲ್ಲ—ಬದನೆ; ಏನು ಕ್ರಯ?" ಎಂದು ತಿದ್ದಿ ನುಡಿದನು ಗೋಂದ.

"ಐದಕ್ಕೆ ಮೂರಾಣೆ!" ಎಂದಳು.

"ನನ್ನ ಗೊನೆಗೆ ಒಂದೂವರೆ ರೂಪಾಯಿ ಒರುತಿತ್ತಲ್ಲ!" ಎಂದುಕೊಳ್ಳುತ್ತ, ಹುಚ್ಚನಂತೆ ಅಲೆದಾಡಿ ಗೋಂದನು ಮುಂದರಿದು, ಸಂತೆಯಲ್ಲಾರಾದರೂ ಆ ಗೊನೆಯನ್ನು ಮಾರಾಟಕ್ಕೆ ತಂದಿರುವರೋ ಎಂದು ನೋಡಿದನು. ಇಲ್ಲ; ದೊರೆಯಲಿಲ್ಲ.

ಗೋಂದನು ಮನೆಗೆ ಮರಳಿದನು.

ಮನೆಗೆ ಒಂದು ತನ್ನ ಅಂಗಿಯನ್ನು ತೆಗೆದಿಟ್ಟು, ಹೊರ ಜಗಲಿಗೆ ಒಂದು ಕುಳಿತು, "ಗೊನೆ ಗೊನೆ ಗೊನೆ!" ಎನ್ನುತ್ತಿರಲು,—

"ಗೊನೆ"ಎಂದೊಂದು ಕೂಗು ಕೇಳಿಸಿತು.

ವಿದ್ಯುತ್ಪ್ರವಾಹದ ಸಂಚಾರವಾದಂತೆ ಗೋಂದನು ಜಗ್ಗನೆ ಎದ್ದು ಕುಳಿತನು. ಒಂದು ಗೊನೆಯನ್ನು ಹಿಡಿದುಕೊಂಡು, ೧೪ ವರ್ಷದ ಬಾಲಕನೊಬ್ಬನು ನಿಂತಿರುವನು!

"ರಸಬಾಳೆ ಗೆ ೊನೆ ಬೇಕೇ ಸ್ವಾಮಿ?" ಎಂದನು ಬಾಲಕ.

ಗೋಂದನು ನೋಡಿದನು. ಕೊನೆಯ ಎರಡುಕಾಯಿಗಳು, ಒಂದು ದಿನ, ಗೋಂದನು ಕೈಯ್ಯಲ್ಲಿ ಕತ್ತಿಹಿಡಿದು ಅಲಕ್ಷದಿಂದ ಬೀಸಿದಾಗ ಅರ್ಧದಷ್ಟು ಕಡಿದುಹೋಗಿದ್ದುವು.

ಈ ಗೊನೆ?—ಗೋಂದನ ಹಿತ್ತಲಿನಿಂದ ಕಳವಾದ ಗೊನೆ!

"ಇದನ್ನು ನಿನ್ನೊಡನೆ ಯಾರು ವಿಕ್ರಯಿಸೆಂದು ಕಳುಹಿದರು?" ಎಂದು ಕೇಳಿದನು ಗೋಂದ.

"ಸಂಕಣ್ಣ; ಇಲೆಕ್ಟ್ರಿಕ್ ಕೆಲಸಮಾಡುತ್ತಾರಲ್ಲ—ಅವರು!"

"ಹುಂ!"—ಎನ್ನುತ್ತ ಗೋಂದನು,—"ಇತ್ತ ಕೊಡು,—ಗೊನೆಯನ್ನು; ಇಲ್ಲಿಟ್ಟುಹೋಗು, ಮತ್ತು ಆ ಸಂಕಣ್ಣನನ್ನು "ನಿನ್ನೆ ನೀನು ಗೊನೆ ಕದ್ದೊಯ್ದ ಮನೆಯ ಗೋಂದನು" ಕರೆದಿರುವನೆಂದು ಹೇಳು. ಅವನು ಬಂದಕೂಡಲೇ ಹಣಕೊಡುತ್ತೇನೆ!" ಎಂದು ಬಾಲಕನನ್ನು ಗದರಿಸಿ, ಗೊನೆಯನ್ನು ತೆಗೆದುಕೊಂಡು ಮನೆಯೊಳಗೆ ಹೋಗಿ, ಅಜ್ಜಿಯ ಮುಂದಿಟ್ಟು,—ನಲಿದಾಡಿದನು.

ಗೊನೆ ತಂದ ಬಾಲಕನಾಗಲೀ, ಅದನ್ನು ಮಾರಾಟಕ್ಕೆ ಕಳುಹಿದ ಸಂಕಣ್ಣನಾಗಲಿ ಇನ್ನೂ ತಮ್ಮ ಹಣಕೇಳಲು ಬಂದಿಲ್ಲ.

"ಇದು ಯಾವ ಊರಿನ ಸುದ್ದಿ?" ಎಂದು ಯಾರಾದರೂ ಕೇಳಿದರೆ,—"ಗೋಂದನಿಗೆ ಗೊನೆ ಸಿಕ್ಕಿದ ಮೇಲೆ ಲೋಕಕ್ಕೆ ಊರಿನ ಹೆಸರೇಕೆ?" ಎಂದೇ ಉತ್ತರ.



# ೯. ಹೆಂಗುಸರು ಬಡಗಿಕೆಲಸ ಕಲಿಯಬೇಕೆ?

ಪ್ರಶ್ನೆಯು ಸುಲಭವಾದುದು; ಕಷ್ಟವೆಂಬುದು ......ಉತ್ತರ ಮಾತ್ರ.

ಆದರೆ, ವಿದ್ಯಾರ್ಥಿಗಳ ಮೇಲೆ ಕರುಣೆಯಿಲ್ಲದೆ, ಕೇಶವ ಮಾಸ್ಟ್ರು ಅದನ್ನು ವಿದ್ಯಾರ್ಥಿಗಳ ಮುಂದೆ ಇಟ್ಟರು!

ಸಹಶಿಕ್ಷಣವು— ಶಾಲೆಯಲ್ಲಿ ಆರಂಭವಾದಂದಿನಿಂದ ಪುರುಷರ ಜೀವನಕ್ಕೆ ಸಂಬಂಧಿಸಿದ ವಿಷಯಗಳ ಮೇಲೆಯೇ ಪ್ರಶ್ನೆಗಳನ್ನು ಕೇಳದೆ, ಹುಡುಗಿಯರಿಗೂ ಪ್ರಬಂಧರಚನೆ ಇತ್ಯಾದಿ ಪಾಠಗಳಲ್ಲಿ ಆಸಕ್ತಿ ಹೆಚ್ಚಲೆಂದು, ಕೇಶವ ಮಾಸ್ಟ್ರು "ಹುಡುಗಿಯರು ತಲೆಬಾಚುವುದೇಕೆ?"—"ದಾಳಿತೊವ್ವೆಗೆ ಎಷ್ಟು ಬಗೆಯ ಒಗ್ಗರಣೆಗಳು ಅವಶ್ಯಕ? ಮತ್ತು ಅದರ ಸಾಧಕ ಬಾಧಕಗಳು"—"ಪತ್ನಿಯು ಪತಿಯ ಉತ್ತಮಾರ್ಧ ವೆಂಬುದನ್ನು ರುಜುಪಡಿಸಿರಿ"—ಇಂತಹ ಪ್ರಶ್ನೆಗಳನ್ನು ಕೊಟ್ಟು, ಆ ಸಂಬಂಧವಾಗಿ ಪ್ರಬಂಧ ಬರೆವಂತೆ ಹೇಳು ತಿದ್ದರು. ಇಂತಹ ಪ್ರಶ್ನೆಗಳಿಗೆ ಉತ್ತರ ಬರೆವುದು ವಿದ್ಯಾರ್ಥಿ ಗಳಿಗಿಂತ ವಿದ್ಯಾರ್ಥಿನಿಗಳಿಗೇ ಹೆಚ್ಚು ಕಷ್ಟತಮವಾಗು ತ್ತಿತ್ತೆಂಬುದೂ ಆಹುದು. ಆದರೆ, ವಿದ್ಯಾರ್ಥಿನಿ ವಿಭಾಗವು ಇಂತಹ ಪ್ರಶ್ನೆಗಳನ್ನು ಮೆಚ್ಚುತಿತ್ತು.

ಒಂದು ಸೋಮವಾರ ದಿನ ಬೆಳಗ್ಗೆ ಶಾಲೆಗೆ ಬಂದ ವರೇ ಕೇಶವ ಮಾಸ್ಟರು, ವಿದ್ಯಾರ್ಥಿಗಳಿಗೆ, ಪ್ರಬಂಧರಚನೆಗೆ ಕೊಟ್ಟ ವಿಷಯವೇ ಇದು—"ಹೆಂಗುಸರು ಬಡಗಿಕೆಲಸ ಏನು, ಕಲಿಯಬೇಕೆ?"

ಆ ತರಗತಿಯ ಮೂವತ್ತು ವಿದ್ಯಾರ್ಥಿಗಳೂ ಹದಿನೈದು ವಿದ್ಯಾರ್ಥಿನಿಗಳೂ ಲೇಖನಿಯನ್ನು ಬಾಯಿಗಿಟ್ಟು ಚೀಪುತ್ತ, ತಮ್ಮೊಳಗೇ ಪ್ರಶ್ನಿಸಿಕೊಂಡರು:—

ಬೇಕೇ ???????

ಆದರೆ, ಎಷ್ಟು ಹೊತ್ತು "ಬೇಕೆ" ಎಂದು ಪ್ರಶ್ನಿಸಿಕೊಳ್ಳಬಹುದು? ಮುಕ್ಕಾಲು ತಾಸಿನೊಳಗೆ ಪ್ರಬಂಧವು ಮುಗಿಯಬೇಕೆಂದು ಕೇಶವ ಮಾಸ್ಟರು ಹೇಳಿದ್ದರು.

ಎಲ್ಲರಿಗೂ ಇದೊಂದು ದೊಡ್ಡ ಸಮಸ್ಯೆಯಾಯಿತು. ಹದಿನೇಳನೇ ವಯಸ್ಸಿಗೆ ಮುಟ್ಟಿದ ಕೆಲವು 'ಬಾಲಕ'ರು ತಮ್ಮಲ್ಲಿ ಉದಯಿಸಿದ ಕೋಮಲಭಾವಗಳ ದ್ಯೋತಕವಾಗಿ 'ಕೋಮಲ ಕರಗಳುಳ್ಳವರಿಗೇಕೆ ಆ ದೊರಗು ಕೆಲಸ?' ಎಂದು ಪ್ರಶ್ನಿಸಿಕೊಂಡರು. ವರ್ಷೇ ವರ್ಷೇ ವಿದ್ಯಾವ್ಯಾಸಂಗ ಮಾಡುತ್ತಲೇ ಹೋಗಿ, ಯಾವ ಕಾಲಕ್ಕೂ ಮನೆಯ ಅಡಿಗೆ ಕೆಲಸವನ್ನು ಕೂಡ ಮಾಡಲಾರೆವೆಂದು ಇಷ್ಟರೊಳಗೇ ನಿರ್ಧರಿಸಿದ 'ಬಾಲಿಕೆ'ಯರು—'ಬಡಗಿ ಕೆಲಸ! ನಮಗೆ!!' ಎಂದು ಮೈದೆಗೆದರು. ಆಗಲೆ ಪುರುಷೋತ್ತಮನು ಅವರ ಸಹಾಯಕ್ಕೆ ಬಂದನು.

ಹೇಗೆ?

ಪುರುಷೋತ್ತಮನಿಗೆ, ಆ ದೊಡ್ಡ ಪ್ರಶ್ನೆಗೆ ತಕ್ಕುದಾದ ಒಂದು ಉತ್ತರ ಆಗಲೇ ಹೊಳೆದಿತ್ತು. ಅದನ್ನು ಒಂದು ಚಿಕ್ಕ ಕಾಗದದ ತುಂಡಿನಲ್ಲಿ ಬರೆದು, ತನ್ನ ಬಳಿಯ ಹುಡುಗನಿಗೆ ನಕಲೆತ್ತುವಂತೆ ಹೇಳಿ, ಆತನು ಮತ್ತೊಬ್ಬನಿಗೆ ಇದೇ ರೀತಿಯ ಸಹಾಯಮಾಡಬೇಕಾಗಿ ತಿಳಿಸಿದನು. ಆ ಚಿಕ್ಕ ಕಾಗದದ ತುಂಡಿನಲ್ಲಿ ಬರೆದ ಅದೊ... ಪಂಜ್ತಿ...

ಹದಿನೈದು ನಿಮಿಷಗಳೊಳಗೆ, ಆ ತರಗತಿಯ ಎಲ್ಲಾ ವಿದ್ಯಾರ್ಥಿಗಳಿಗೂ ತಲಪಿತು!

"ಉತ್ತರ ಬರೆದಾಯಿತೇ?" ಎಂದು ಕೇಶವ ಮಾಸ್ಟರು ಕೇಳಿದರು.

"ಅಹುದು!" ಎನ್ನುತ್ತ, ಆ ನಲ್ವತ್ತೈದು ವಿದ್ಯಾರ್ಥಿಗಳಲ್ಲಿ ನಲ್ವತ್ತನಾಲ್ಕು ಮಂದಿ ಮುಂದೆ ಹೋಗಿ, ತಾವು ಬರೆದಿದ್ದ ಉತ್ತರದ ಚೀಟುಗಳನ್ನು ಮಾಸ್ಟರಿಗೆ ಕೊಟ್ಟರು. ಕೊಡದೆ ಸುಮ್ಮನೆ ಕುಳಿತ ಆಸಾಮಿ ಪುರುಷೋತ್ತಮನೊಬ್ಬ!

"ಏನು ಪುರುಷೋತ್ತಮಾ? ಈ ಕ್ಲಾಸಿನಲ್ಲಿ ನೀನೊಬ್ಬನೇ ದಡ್ಡನಾಗಬೇಕೆ? ಪ್ರತಿಯೊಂದು ಬಾರಿಯೂ ನೀನು ಉತ್ತರವನ್ನೆ ಕೊಡುವವನಲ್ಲ!" ಎಂದರು ಕೇಶವ ಮಾಸ್ಟರು.

ವಿದ್ಯಾರ್ಥಿಗಳಿಗೆ ಈ 'ದಡ್ಡ'ನಿಂದ ತಾವು ಈಗ ನಕಲೆತ್ತಿದೆವೆಂದು ಪಶ್ಚಾತ್ತಾಪವಾಯಿತು. ಯಾವ ಉತ್ತರವೂ ಸೂಚನೆಯಾಗದೆ ಮೌಢ್ಯದಿಂದಿದ್ದ ಅದೊಂದು ಕ್ಷಣದಲ್ಲಿ ಅವರು, ಅವನು ಕೊಟ್ಟ ಉತ್ತರವನ್ನು ಆತುರದಿಂದ ಪಡೆದಿದ್ದರು!

ಪುರುಷೋತ್ತಮನು ದಡ್ಡನೆಂಬುದು ನಿಜ. ಆ ಶಾಲೆಯ ಹಳೆ ವಿದ್ಯಾರ್ಥಿಗಳಾಗಲೀ ಹೊಸಬರಾಗಲೀ— ಪುರುಷೋತ್ತಮನು ಯಾವ ವರ್ಷವೂ ತೇರ್ಗಡೆ ಹೊಂದಿದುದನ್ನು ನೋಡಿರಲಿಲ್ಲ. ಆದರೂ, ಅವನು ಏಳನೆ ತರಗತಿಯಲ್ಲಿದ್ದನೆಂಬುದು ಆಶ್ಚರ್ಯಕರವಾದ ಸತ್ಯ! ಪುರುಷೋತ್ತಮನಿಗೆ ಏಳನೆ ತರಗತಿಯಲ್ಲಿ ಇವರೇ ಕೇಶವ ಮಾಸ್ಟರು ಕೇಳಿದ ಕೆಲವು ಪ್ರಶ್ನೆಗಳಿಗೆ ಆತನು ಕೊಟ್ಟ ಉತ್ತರಗಳು....... ಇಗೋ ಕೆಲವನ್ನು:-

ಪ್ರಶ್ನೆ (೧):—ಗ್ರಾಮಗಳಲ್ಲಿ ಮದ್ಯಪಾನನಿಷೇಧ ಪ್ರಚಾರವನ್ನು ನಾವು ಹೇಗೆ ಸಾಧಿಸಬೇಕು?

ಉತ್ತರ:—ಗ್ರಾಮಗಳಿಗೆ ಹೋದಾಗ ನಾವು ಕುಡಿಯಬಾರದು.

ಪ್ರಶ್ನೆ (೨):—ಹಿಂದೂದೇಶದಲ್ಲಿ ಶಿಶುಮರಣಗಳು ಹೆಚ್ಚಲು ಕಾರಣವೇನು?

ಉತ್ತರ:—ಶಿಶುಗಳು ಹೆಚ್ಚಾಗಿ ಹುಟ್ಟುವುದರಿಂದ.

ಪ್ರಶ್ನೆ (೩):—ಮೂವರು ಹೆಂಗುಸರು ಒಂದೂವರೆ ದಿನದಲ್ಲಿ ಐದೆಕ್ರೆ ಸ್ಥಳದಲ್ಲಿ ನೇಜಿ ಬಿತ್ತುವಾಗ ಇಬ್ಬರು ಗಂಡಸರು ಒಂದೇ ದಿನದಲ್ಲಿ ಬಿತ್ತುವರು. ಎಂಟೆಕ್ರೆ ಸ್ಥಳಕ್ಕೆ ಇಬ್ಬರಿಗೂ ತಗಲುವ ಸಮಯವೆಷ್ಟು?

ಉತ್ತರ:—ಅವರ ಪ್ರಾಯವೆಷ್ಟು? ಕೊಡುವ ಕೂಲಿ ಎಷ್ಟು?

ಇಂತಹ ದಡ್ಡನನ್ನು ಇಂದು ಕೇಶವ ಮಾಸ್ಟರು "ಹೆಂಗುಸರು ಬಡಗಿ ಕೆಲಸವನ್ನು ಕಲಿಯಬೇಕೆ" ಎಂಬ ಪ್ರಶ್ನೆಯಿಂದ ಪೀಡಿಸಿದ್ದರು.

"ಏನು ಪುರುಷೋತ್ತಮಾ, ಉತ್ತರ ಕೊಡುವುದಿಲ್ಲವೇ?" ಎಂದು ಪುನಃ ಕೇಳಿದರು ಕೇಶವ ಮಾಸ್ಟರು.

ಪುರುಷೋತ್ತಮನು ಮೆಲ್ಲನೆ ಒಂದು ಕಾಗದವನ್ನು ತೆಗೆದು, ಒಂದು ಶಬ್ದವನ್ನು ಗೀಚಿ ಕೊಟ್ಟನು. ಮಾಸ್ಟರು ಓದಿದರು.

ನಲ್ವತ್ತೈದು ವಿದ್ಯಾರ್ಥಿಗಳ ಉತ್ತರವೂ ಏಕರೀತಿಯಲ್ಲಿ ಹೀಗಿತ್ತು:—"ಸಾಧು ಗಂಡನಿದ್ದರೆ, ಹೆಂಡತಿಯು ಬಡಗಿ ಕೆಲಸವನ್ನು ಕಲಿಯಬಾರದು."

ಪುರುಷೋತ್ತಮನ ಉತ್ತರವು ಹೀಗಿತ್ತು:—"ಗಂಡನಿಗೆ ಅದು ಮೊದಲು ತಿಳಿದಿರಬೇಕು!"

ಮನೆಗೆ ಹೋಗುವಾಗ ಕೇಶವ ಮಾಸ್ತರು ಪುರುಷೋತ್ತಮನನ್ನು ಮೆಲ್ಲಗೆ ಕರೆದು ಕೇಳಿದರು:—"ಪುರುಷೋತ್ತಮ, ನೀನು ನಮ್ಮ ಸರಿಕರೆಯವನು; ನಿನಗೇನೋ ತಿಳಿದಿದೆ. ನಲ್ವತ್ತೈದು ಹುಡುಗರಿಗೂ ಆ ಉತ್ತರ ಬರೆದುಕೊಟ್ಟವರು ಯಾರು?"

"ನಾನು."

"ಹುಂ! ನಿನ್ನ ಉತ್ತರ ಮಾತ್ರ ಬೇರೆಯೇ ಇದೆ. ಅದನ್ನು ಯಾರು ಹೇಳಿಕೊಟ್ಟರು?"

"ನೀವು."

"ನಾನು?!?"

"ಅಹುದು; ನಿನ್ನೆ ರಾತ್ರೆ ನಿಮ್ಮೊಡನೆ ಜಗಳವಾಡುತ್ತ ನಿಮ್ಮ ಹೆಂಡತಿ, ಜಗಲಿ ಮೇಲೆ ಬಡಗಿಯವನು ಬಿಟ್ಟುಹೋದ ಉಳಿಯನ್ನೆತ್ತಿದುದನ್ನು ನಾನು ನೋಡಿದೆ. ಆದರಿಂದ ಹುಡುಗರಿಗೆಲ್ಲಾ ಉತ್ತರ ಬರೆದುಕೊಟ್ಟೆ. ಆ ಮೇಲೆ ಈ ದಿನ ನಿಮ್ಮ ಮುಖವು ಕಂದಿದುದನ್ನು ನೋಡಿದೆ! ಇವೆರಡರಿಂದ ಒಂದೇ ಬಗೆಯ ಉತ್ತರವು ಎರಡು ರೂಪಗಳಲ್ಲಿ ಹೊಳೆಯಿತು!"

ಪುರುಷೋತ್ತಮನು ಆ ವರ್ಷ ಆ ತರಗತಿಯಿಂದ ತೇರ್ಗಡೆ ಹೊಂದಿದನೆಂದೂ, ಕೇಶವ ಮಾಸ್ತರು ಆತನಲ್ಲಿದ್ದ ಗುಪ್ತ ವಿದ್ವತ್ತನ್ನು ವರ್ಣಿಸಿದುದರ ಫಲವೇ ಅದೆಂದೂ ಹೇಳುವರು.

# ೧೦. ಸಂಪಾದನ.

ಇವರೊಬ್ಬ ಎಡಿಟರ್ —ಶ್ರೀಪಾದರಾಯರು!

"ಶಿಂಗಣ್ಣಾ!" ಎಂದರು. ಗೋಡೆಗಳೆಲ್ಲ ಕಂಪಿಸಿದುವು. ಅವುಗಳಿಂದ ಸಿಡಿದುಬಂದಂತೆ, ನಾಲ್ಕಡಿಯ ಒಂದು ಮಹಾ ದೀನಪ್ರಾಣಿಯು ಸಂಪಾದಕರ ಎದುರಿಗೆ ಬಂದು ನಿಂತಿತು.

"ಶಿಂಗಣ್ಣಾ!"

"ಸಾರ್!"

"ನಮ್ಮ ಈ ವಾರದ ಸಂಚಿಕೆಯಲ್ಲಿ ಪ್ರೆಸಿಡೆಂಟ್ ಪಟೇಲರ ಜೀವನ ಚರಿತ್ರೆಯು ಬರಬೇಕು—ಬರಲೇಬೇಕು. ಅವರು ಕಾಲವಾದರಂತೆ. ತಿಳಿಯಿತೇ?"

"ಸತ್ತರೇ?"

"ಖಂಡಿತವಾಗಿ ಸತ್ತರು. ನಿನಗೇಕೆ ಸಂದೇಹ? ಅವರು ಎಸೆಂಬ್ಲಿ ಅಧ್ಯಕ್ಷರಾಗಿದ್ದರಲ್ಲವೇ?"

"ಅಹುದು ಸಾರ್"

"ಅವರು ಎಸೆಂಬ್ಲಿಯಲ್ಲೇನೇನು ಮಾಡಿದ್ದರೆಂದು ಗೊತ್ತೇ?"

"ಅಧ್ಯಕ್ಷತನವನ್ನು ವಹಿಸಿ ಭಾಷಣಗಳನ್ನು ಮಾಡಿದ್ದರು."

"ಸರಿ. ಆ ಭಾಷಣಗಳೆಲ್ಲವನ್ನೂ ಚುಟುಕಿನಿಂದ ಬರೆದುಬಿಡು.. ಅವರ ವಯಸ್ಸೆಷ್ಟು?"

"ಎಪ್ಪತ್ತೋ ಎಂಭತ್ತೋ . . . ?"

"ಏನಾದರೂ ಇರಲಿ 'ಅಕಾಲ ನಿಧನಹೊಂದಿದ'ರೆಂದು ಬರೆದುಬಿಡು. ಅವರಿಗೆ ಮಕ್ಕಳಿವೆಯೇ?"

"ಇರಬೇಕು."

"ಇರಬೇಕು—ಎಂದರೇನಯ್ಯಾ? ಅದು ನಿನ್ನ ಇಚ್ಛೆಯೇ? ಅದೆಲ್ಲ ನಿಮಗೆ ತಿಳಿದಿರದಿದ್ದರೆ ನೀವೆಲ್ಲಾ ಪತ್ರಿಕೆಗಳಿಗೆ ಬರೆವುದೇನಂತೆ? ನಿಮಗೇಕಂತೆ ಈ ಕೆಲಸ? ಇರುವರೋ ಇಲ್ಲವೋ ಹೇಳಿಬಿಡು!"

"ಮೂವರು ಇರುವರು."

"ಹಾಗೆಹೇಳು-ಅದನ್ನೂ ಕಾಣಿಸಬೇಕು ಪತ್ರಿಕೆಯಲ್ಲಿ. ತಿಳಿಯಿತೇ?"

"ಆಗಬಹುದು."

ಶಿಂಗಣ್ಣನು ತನ್ನ ಕೋಣೆಗೆ ಹೊರಟುಹೋದನು. ಸಂಪಾದಕರು ತಮ್ಮ ಮೇಜಿನಿಂದ 'ಅಮೃತಬಜಾರ' ಪತ್ರಿಕೆಯನ್ನು ತೆಗೆದು, ಕಾಳಿಗೆ ಐವರು ಹುಡುಗರನ್ನು ಬಲಿಕೊಟ್ಟ ಸನ್ಯಾಸಿಯ ಮೊಕದ್ದಮೆಯನ್ನೋದ ತೊಡಗಿದರು.

ಅಷ್ಟರಲ್ಲಿ "ಹೋ ಹೋ ಹೋ" ಎನ್ನುತ್ತ ಪದ್ಮಯ್ಯನವರ ಪ್ರವೇಶವಾಯಿತು. ಬಂದವರೇ ಒಂದು ಕುರ್ಚಿಯನ್ನೆಳೆದು ಕುಳಿತು, "ಶ್ರೀಪಾದರಾಯರೇ, ಏನು ಸ್ವಾಮಿ ಇದು ನಿಮ್ಮ ಪತ್ರಿಕೆ! ವಿದೇಶೀ ರಾಜಕೀಯಗಳನ್ನೇ ನೀವು ಬರೆಯುವುದಿಲ್ಲವಲ್ಲ!" ಎಂದರು.

ಶ್ರೀಪಾದರಾಯರ ಮುಖ ಕೆಂಪಗಾಯಿತು. "ಶಿಂಗಣ್ಣಾ!" ಎಂದರು. ಶಿಂಗಣ್ಣನು ಬಂದು ನಿಂತನು.

"ಶಿಂಗಣ್ಣಾ!"

"ಸಾರ್!"

"ವಿದೇಶೀ ರಾಜಕೀಯಗಳೇ ಬರುವುದಿಲ್ಲ. ಅದೇನು?"

"ಈ ಸಾರಿ ಬರೆಯಲೇ?"

"ಹಾಗೆ ಹೇಳುವುದರ ಅರ್ಥವೇನಯ್ಯಾ? ಸಂದೇಹವೇ ನಿನಗೆ? ಪತ್ರಿಕೆಯೆಂದರೇನು, ವಿದೇಶ—ಸ್ವದೇಶ ಎಲ್ಲವೂ ಬರಲೇಬೇಕು. ಈ ಬಾರಿ ಏನನ್ನು ಬರೆಯುತ್ತಿ?"

"ವಾನ್ ಪೇಪನರಿಗೂ ಹಿಟ್ಲರರಿಗೂ ಚುನಾವಣೆಯ ಯುದ್ಧ."

"ಅದನ್ನೆಲ್ಲಾ ಬರಿ. ಎಷ್ಟುಮಂದಿ ಸತ್ತರೆಂದೂ ಬರಿ ಪೇಪನರ ಮತ್ತು ಹಿಟ್ಲರರ ಜೀವನ ಚರಿತ್ರವನ್ನೂ ಬರಿ. ತಿಳಿಯಿತೇ? ಇನ್ನೇನಿದೆ?"

"ಅಮೇರಿಕದಲ್ಲಿ ರೂಸ್‌ವೆಲ್ಟರು. . . ."

"ರೂಸ್‌ವೆಲ್ಟರ ವಿಷಯ ಬರೆಯಲೇ ಬೇಕು. ತಿಳಿಯಿತೇ?"

"ತಿಳಿಯಿತು."

ಅರ್ಧತಾಸು ಕಳೆಯಿತು. ಮುಂಡಾಲ ಕೇರಿಯ ಮಾದಯ್ಯನವರ ಆಗಮನ!

"ಶ್ರೀಪಾದರಾಯರೇ, ಕಳೆದ ಸಂಚಿಕೆಯಲ್ಲಿ, ಆ ಭದ್ರಮ್ಮ ಗುಡ್ಡದ ಮರ ಕಡಿಸಿದುದನ್ನು ಚೆನ್ನಾಗಿ ಟೀಕಿಸಿರುವಿರಿ. ಬೇಷ್! ಇಲ್ಲದಿದ್ದರೆ ಬುದ್ಧಿ ಬರೋದಿಲ್ಲ ಈ ಮಕ್ಕಳಿಗೆ

ಸ್ವಾಮಿ. ಹಾಗೆ ಬರೆಯುವುದು ಪತ್ರಿಕೆಗಳ ಧರ್ಮ ಸ್ವಾಮೀ. ಆದರೆ, ಶ್ರೀಪಾದರಾಯರೇ, ನಿಮ್ಮ ಪತ್ರಿಕೆಯಲ್ಲಿ ಸ್ವದೇಶದ ಸುದ್ದಿಗಳೇ ಕಡಿಮೆಯಾಗಿವೆಯಲ್ಲ. ಸ್ವದೇಶ ರಾಜಕೀಯ ಗಳ ವಿಷಯವೂ ನೀವು ಇತ್ತೀಚೆಗೆ ಏನೂ ಬರೆಯುವುದಿಲ್ಲ."

"ಶಿಂಗಣ್ಣಾ" ಎಂದರು ಶ್ರೀಪಾದರಾಯರು.

"ಸಾರ್!"

"ನಮ್ಮ ಪತ್ರಿಕೆಯಲ್ಲಿ ಶಿಂಗಣ್ಣಾ—ಅಯ್ಯೋ ಪರ ಮಾತ್ಮಾ—ಸ್ವದೇಶೀ ಸುದ್ದಿಗಳನ್ನೂ ಸ್ವದೇಶೀ ರಾಜಕೀಯ ಗಳನ್ನೂ ನೀನು ಕಡಮೆ ಮಾಡಿದರೆ ಹೇಗೆ ಶಿಂಗಣ್ಣಾ?"

"ಕಡಿಮೆಯಾಯಿತೇ ಸಾರ್?"

"ಸಂದೇಹವೇ ನಿನಗೆ? 'ಅಗದೀ' ಕಡಮೆಯಾಯಿತು. ಹೆಚ್ಚಿಸಬೇಕು, ತಿಳಿಯಿತೇ? ಈ ಬಾರಿ ಸ್ವದೇಶಿ ರಾಜಕೀಯ ಗಳೇನಿವೆ?"

"ಸಂಯುಕ್ತ ಪ್ರಾಂತ್ಯದ ಮಂತ್ರಿಮಂಡಲದ ಮೇಲೆ ಅವಿಶ್ವಾಸದ ಠರಾವು—ಮದರಾಸು ಸಚಿವರ ಕುಂಭಕೋಣ ಭಾಷಣ—ಪಂಜಾಬಿನ ರೈತರಿಗೆ ಸರಕಾರದ ರಿಯಾಯತಿ ನಾಸ್ತಿ– – – –"

"ಅದೆಲ್ಲ ಬರಬೇಕು ಶಿಂಗಣ್ಣಾ–ಬರಲೇಬೇಕು. ಸ್ವದೇಶ ರಾಜಕೀಯಗಳಿಗಲ್ಲದೆ ನಮ್ಮ ಪತ್ರಿಕೆ ಮತ್ತೇತಕ್ಕೆ? ತಿಳಿ ಯಿತೇ?"

"ತಿಳಿಯಿತು."

ಅರ್ಧತಾಸು ಕಳೆಯಿತು.

"ಶ್ರೀಪಾದರಾಯರೇ!"

"ಯಾರು, ನರಸಿಂಹಪ್ಪನವರೇ? ಬನ್ನಿ ಬನ್ನಿ ಬನ್ನಿ!"

"ಶ್ರೀಪಾದರಾಯರೇ–ನಿಮ್ಮ ಪತ್ರಿಕೆಯ ವಿಷಯವಾಗಿ ಒಂದು ಮಾತುಹೇಳಲು ಬಂದೆ. ನೋಡಿ ಸ್ವಾಮಿ, ಆ ಸುದ್ದಿ— ಈ ಸುದ್ದಿ ಬರೆಯುತ್ತೀರಿ, — ಅವುಗಳನ್ನೊಂದಿಷ್ಟು ಕಡಿಮೆಮಾಡಿ, ಒಂದು ಒಳ್ಳೆಯ ಕಥೆ ಬರೆಯಬಾರದೇ? ಒಂದು ತಾಸು ಓದಬಹುದು. ಅದು ಬಿಟ್ಟು ನಮಗೆ ಎಲ್ಲೆಲ್ಲಿ ಯಾರ್ಯಾರು ಖೂನಿಮಾಡಿದ ಸುದ್ದಿಯೇಕೆ ಸ್ವಾಮಿ?"

ನಿಜ! . . . . "ಶಿಂಗಣ್ಣಾ!"

"ಸಾರ್!"

"ನಮ್ಮ ಪತ್ರಿಕೆಯಲ್ಲಿ ಕಥೆಗಳೇ ಇಲ್ಲವೇನು? ಒಂದು ಒಳ್ಳೆ ಕಥೆ ಬರೆದುಕೊಡು, ತಿಳಿಯಿತೇ?"

"ತಿಳಿಯಿತು."

ಕಾಲುತಾಸು ಕಳೆಯಿತು. ಮುರಾರಿರಾಯರ ಆಗಮನ.

"ಸ್ವಾಮಿ—ಶ್ರೀಪಾದರಾಯರೇ, ನಮಸ್ಕಾರ!"

"ನಮಸ್ಕಾರ!"

"ಸ್ವಾಮಿ, ನಿಮ್ಮ ಪತ್ರಿಕೆ ಕಳೆದವಾರ ತಲಪಿಲ್ಲ"

"ಶಿಂಗಣ್ಣಾ!"

"ಸಾರ್!"

"ಇವರ ಪತ್ರಿಕೆ ಕಳೆದವಾರ ತಲಪಲಿಲ್ಲವಂತೆ. ಏಕೆ ತಲಪಲಿಲ್ಲ?"

"ವಿಚಾರಿಸುತ್ತೇನೆ."

"ವಿಚಾರಿಸುತ್ತೇನೆ! ಪ್ರತಿವಾರವೂ ದೂರು ಬರುತ್ತಿದೆ, ನೀನು ವಿಚಾರಿಸುತ್ತಿ. ದೂರುಬರುವ ಮೊದಲೇ ವಿಚಾರಿಸ ಬಾರದೇ?"

"ಸ್ವಾಮೀ-ಶ್ರೀಪಾದರಾಯರೇ, ಮತ್ತೊಂದು ವಿಷಯ ಹೇಳುತ್ತೇನೆ. ನಿಮಗೆ ಹಿತಕಂಡರೆ ಹಾಕಬಹುದು. ಹೇಳಲೇ?"

"ಸಂಕೋಚವೇಕೆ ಸ್ವಾಮಿ? ಹೇಳಿಬಿಡಿ."

"ನೋಡಿ, ನಿಮ್ಮ ಪತ್ರಿಕೆಯಲ್ಲಿ ಒಂದೊಂದು ಒಳ್ಳೆ ಚಕ್ರಬಂಧ ಒಗಟು ಕೊಡಬೇಕು ಸ್ವಾಮಿ. ಈಗಿನ ಕಾಲ ದಲ್ಲಿ ಚಕ್ರಬಂಧವೇ ಬೇಕು. ಆ ಸುಜ್ಞಾನ ಪತ್ರಿಕೆಯವರ ಹಾಗೆ ಸುಟ್ಟಕಥೆಗಳನ್ನೂ ಹಿಟ್ಲರ್ ಮತ್ತು ಬಟ್ಲರ್ ಎಂದು ಯಾರಿಗೂ ಬೇಡವಾದ—'ನಮ್ಮ ಕನಸಿನಲ್ಲಿಯೂ ಕೇಳದ ಹೆಸರುಗಳನ್ನೂ ಕೊಟ್ಟು ಏನೂ ಪ್ರಯೋಜನವಿಲ್ಲ."

"ಶಿಂಗಣ್ಣಾ!"

"ಸಾರ್!"

"ನಮ್ಮ ಪತ್ರಿಕೆಯಲ್ಲಿ ಹಿಟ್ಲರ್ ಮತ್ತು ಕಟ್ಲರ್ ಎಂದು ಸುಟ್ಟಸುದ್ದಿಗಳನ್ನೇಕೆ ನೀನು ಕೊಡುತ್ತೀ? ಮತ್ತು ನೋಡು, ಶಿಂಗಣ್ಣಾ, ಕೆಟ್ಟಕಥೆಗಳಿಂದಲೂ ಏನೂ ಪ್ರಯೋಜನವಿಲ್ಲ. ಕೈ ತಿರುಗಿದಂತೆ ಬರೆದರೆ ಪತ್ರಿಕೆಯಾಗುವುದೇ? ನೀನು ಮಹಾ ಬುದ್ಧಿವಂತನೆಂದು ನಿನ್ನ ಮನಸ್ಸಿನಲ್ಲಿರಬಹುದು ಶಿಂಗಣ್ಣಾ. ಆದರೆ, ಶಿಂಗಣ್ಣಾ, ಜನರು ನಿನಗಿಂತ ಬುದ್ಧಿ ವಂತರು ಶಿಂಗಣ್ಣಾ! ಅವರ ಅಭಿರುಚಿಯನ್ನು ನೋಡಿಯೇ

ನಾವು ಬರೆಯಬೇಕು ಶಿಂಗಣ್ಣಾ. ಈ ಸಂಚಿಕೆಯಿಂದ ಮೊದ ಲ್ಗೊಂಡು ಒಂದೊಂದು ಒಳ್ಳೊಳ್ಳೆ ಚಕ್ರಬಂಧ ಬರಲಿ— ತಿಳಿಯಿತೇ?"

"ತಿಳಿಯಿತು "

ಹೀಗೆ ಹನ್ನೆರಡು ಜನರು ಬಂದರು. ಹನ್ನೆರಡು ಬಗೆ ಯಾಗಿ ಸೂಚನೆಕೊಟ್ಟರು. ಸಂಪಾದಕರು ಶಿಂಗಣ್ಣನನ್ನು ಹನ್ನೆರಡು ಬಾರಿ ಕರೆದು, ಹನ್ನೆರಡು ಉಪದೇಶಗಳನ್ನು ಕೊಟ್ಟು, ಹನ್ನೆರಡುಬಾರಿ 'ತಿಳಿಯಿತೇ?' ಎಂದು ಕೇಳಿದರು. ಶಿಂಗಣ್ಣನು ಹನ್ನೆರಡುಬಾರಿ ತಿಳಿಯಿತೆಂದನು.

ಸಾಯಂಕಾಲ ಮನೆಗೆ ತೆರಳುವ ಹೊತ್ತಿಗೆ ಸಂಪಾದ ಕರು ಶಿಂಗಣ್ಣನನ್ನು ಹದಿಮೂರನೆಯ ಬಾರಿ ಕರೆದರು. ಬಂದು ನಿಂತು, "ಸಾರ್!" ಎಂದನು.

"ಶಿಂಗಣ್ಣಾ, ಪತ್ರಿಕೆ ನಾಳೆ ಸಾಯಂಕಾಲದೊಳಗೆ ಅಚ್ಚಾಗಬೇಕು—ಆಗಲೇ ಬೇಕು. ಈ ಬಾರಿ ಎರಡುಪುಟ ಹೆಚ್ಚು ಕೂಡಿಸಿದರೂ ಚಿಂತೆಯಿಲ್ಲ, ತಿಳಿಯಿತೇ?" ಎಂದು ಕೇಳಿದರು.

ಶಿಂಗಣ್ಣನು ಹದಿಮೂರನೆ ಬಾರಿ, "ತಿಳಿಯಿತು!" ಎಂ ದನು.

"ಎಲ್ಲವೂ ಬರೆದಾಯಿತೇ?" ಎಂದು ಕೇಳಿದರು ಸಂಪಾ ದಕ ಮಹಾಶಯರು.

"ಅಹುದೆ"ಂದಿತು ಶಿಂಗಣ್ಣಮೂರ್ತಿ.

"ಇತ್ತ ತಾರೆ"ಂದಿತು ಸಂಪಾದಕ ...ಗೆ.

ಶಿಂಗಣ್ಣನು ತನ್ನ ಕೋಣೆಗೆ ಹೋಗಿ, ಮಡಚಿದ ಒಂದು ಕಾಗದವನ್ನು ತಂದು ಸಂಪಾದಕರ ಕೈಗೆ ಕೊಟ್ಟನು.

ಸಂಪಾದಕರು ಬಿಡಿಸಿದರು, ನೋಡಿದರು. ಏನನ್ನು?

ಒಂದು ಹುಲಿ; ಒಂದು ಕರಡಿ; ಒಂದು ನೀರುಕುದುರೆ; ಒಂದು ಗೋರಿಲ್ಲ; ಒಂದು ಎಮ್ಮೆ; ಒಂದು ಆಡು; ಒಂದು ಕಾಗೆ; ಒಂದು ನರಿ; ಒಂದು ಎತ್ತು; ಒಂದು ಹೆಬ್ಬಾವು; ಒಂದು ನಾಗಪ್ಪ, ಒಂದು ಹಂದಿ—ಇವಿಷ್ಟು ಚಿತ್ರಗಳೂ, ಅವುಗಳ ಕೆಳಗೆ, ಕ್ರಮವಾಗಿ—ಪದ್ಮಯ್ಯ, ಮಾದಯ್ಯ, ನರಸಿಂಹಪ್ಪ, ಮುರಾರಿರಾವ್—ಹೀಗೆ ಹೆಸರುಗಳನ್ನೂ ಬರೆದು, ಸಂಪಾದಕರನ್ನು ಅವುಗಳ ಮೇಲೆ ಮಲಗಿಸಿ, ನರಕವನ್ನೆ ಕಣ್ಣಮುಂದಿಟ್ಟಿದ್ದನು!

ಆಶ್ಚರ್ಯ—ಕ್ರೋಧಗಳಿಂದ ಸಂಪಾದಕರು ತಲೆ ಎತ್ತಿ ನೋಡಿ, "ಶಿಂಗಣ್ಣಾ!" ಎಂದರು.

'ಠಪ್' ಎಂಬೊಂದು ಶಬ್ದ ಕೇಳಿತು. ಶಿಂಗಣ್ಣನು ಮಾಯವಾಗಿದ್ದನು. ಸಂಪಾದಕರು ಬಾಗಿಲಿನ ತನಕ ಹೋಗಿ, ಬಾಗಿಲು ತೆರೆದು ನೋಡಿದರು. ಒಂದು ಫರ್ಲಾಂಗು ದೂರದಲ್ಲಿ ಚಿಕ್ಕದೊಂದು ವ್ಯಕ್ತಿಯು, ಬೇಟೆನಾಯಿಗಳು ಹಿಂಬಾಲಿಸಿದಂತೆ ಓಡಿಹೋಗುತಿತ್ತು.

"ಹಾಳಾಗಲಿವನು! ಇವನಿಗೇನು ಹುಚ್ಚೇ?" ಎನ್ನುತ್ತ ಶ್ರೀಪಾದರಾಯರು, ಮೃಗಕೋಟಿಯ ಚಿತ್ರಾವಳಿ ಇರುವ ಆ ಕಾಗದದ ಕಡೆಗೆ ಇನ್ನೊಮ್ಮೆ ನೋಡಿದರು. ಆ ಮೇಲೆ ತಿರುವಿದರು. ಅಲ್ಲಿ—

“ಎರಡು ತಿಂಗಳು ಅನ್ನ ಕೊಟ್ಟುದಕ್ಕೆ ನಿಮಗೆ ನನ್ನ ಕೃತಜ್ಞತೆಗಳು ಸಲ್ಲಬೇಕಾಗಿವೆ. ಆದರೆ, ಗೋಳಾಡಿಸಿ ಅನ್ನ ಕೊಟ್ಟುದಕ್ಕೆ ನಿಮಗೆ ನರಕ ತಪ್ಪದೆಂದು ನನ್ನ ಅಭಿಪ್ರಾಯ. ನೀವು ಸಂಪಾದಕರಲ್ಲ. ಸಂಪಾದಕರ ಕಾಲಿನ ಧೂಳಾಗ ಲಿಕ್ಕೂ ಯೋಗ್ಯರಲ್ಲವೆಂದು ವಿನಯದಿಂದ ತಿಳಿಸುವೆನು. ನೀವು ಸಂಪಾದಕರಾಗುವ ಬದಲು ಛಾಪಖಾನೆಯ ಮೊಳೆ ಜೋಡಿಸುವ ಕೋಣೆಯಲ್ಲಿ ಕಸತೆಗೆಯುವ ಕೆಲಸವನ್ನು ಮಾಡಿಕೊಂಡು ಕ್ರಮೇಣ ಸಂಪಾದಕನಾಗುವ ಯೋಗ್ಯತೆ ಯನ್ನು ಗಳಿಸಿಕೊಳ್ಳಬೇಕೆಂದು ನನ್ನ ಸೂಚನೆ. ಇನ್ನು ನಿಮ್ಮ ಪತ್ರಿಕಾ ಆಫೀಸಿನಲ್ಲಿ ನಾನಿರುವುದಂತೂ ಇಲ್ಲ; ಈ ಊರಿನಲ್ಲೇ ನನ್ನನ್ನು ನೀವು ಕಂಡರೆ ನನ್ನ ಹೆಸರು ಶಿಂಗಣ್ಣ ನಲ್ಲ” ಎಂದು ಬರೆದಿತ್ತು.

ಹಲ್ಲುಗಳನ್ನು ಕಡಿಯುತ್ತ, ಕಾಗದವನ್ನು ಹರಿದು, ನೆಲಕ್ಕೆ ರಭಸದಿಂದ ಬಿಸಾಡಿ, ಸಂಪಾದಕರು—“ಕೃತಜ್ಞತೆ ಯಿಲ್ಲದ ನಾಯಿ!” ಎಂದರು.

ಶಿಂಗಣ್ಣನೀಗ ಮತ್ತೊಂದು ಕಡೆಯಲ್ಲಿಯೂ ಉಪ ಸಂಪಾದಕನಂತೆ ಕೃತಘ್ನ!



# ೧೧. ಧನಿ ಯಾರು?

ರಾಮಮೋಹನನು ಜಾಗೃದಾವಸ್ಥೆಯಲ್ಲಿಯೂ ಕನ ವರಿಸುವ ತರುಣ. ಯಾವಾಗಲೂ ಸವಿಗನಸುಗಳಾತನಿಗೆ. ಪುಣ್ಯಾತ್ಮ

ಅರ್ಧದೇಹವನ್ನಾತನು ಪಾಯಿಜಾಮೆಗಳಲ್ಲಿ ಮಡಗಿ, ಉಳಿದರ್ಧವನ್ನು ಒಂದು ಶರ್ಟಿನಲ್ಲಿ ಮುಚ್ಚುವನು. ತಲೆಗೆ ಎಣ್ಣೆ ಹಚ್ಚದೆ ಕ್ರಾಪ್ ಬಿಡಿಸಿಕೊಳ್ಳುವ ಚದುರತನವೂ ಇದೆ. ಅದು, ಬಾಚಣಿಗೆಯ ಅಪ್ಪಣೆಯನ್ನು ಮೀರಿದಾಗ ಲೆಲ್ಲ ಎಲ್ಲಿ ಯಾವ ಬಗೆಯ ನೀರು ದೃಗ್ಗೋಚರವಾದರೂ ರಾಮಮೋಹನನು ತನ್ನ ಕೈಯನ್ನು ಆ ನೀರಿನ ಮೇಲಾ ಡಿಸಿ ಅಲ್ಲಿಂದ ತಲೆಗೊಯ್ದು ತಲೆಯಲ್ಲಾಡಿಸಿ, ತನ್ನ ಕಿಸೆ ಯಿಂದ ಚಿಕ್ಕದೊಂದು ಹಣಿಗೆಯನ್ನು ತೆಗೆದು ಕೂದಲು ಗಳಿಗೆ ಮತ್ತೊಮ್ಮೆ ಆಜ್ಞೆ ಕೊಡುವನು. ಅವು, ಇವನೊಡ ನೇಕೆ ಸೆಣಸಾಟವೆನ್ನುತ್ತ ಮೌನವಾಗಿ ಪವಡಿಸುವುವು. ಆ ಮೇಲೆ ರಾಮಮೋಹನನು ಕಣ್ಣುಗಳನ್ನು ಅರೆವಾಸಿ ಮುಚ್ಚಿ ಸವಿಗನಸುಗಳನ್ನುಣ್ಣುವುದರಲ್ಲಿ ನಿಮಗ್ನನಾಗುವನು.

ಇಂತಹ ಜಲಚೌರ್ಯದಲ್ಲಿ ತೊಡಗಿದಾಗಲೇ (ಒಂದು ಹೋಟಲಲ್ಲಿ) ಕೇಶುವು ರಾಮಮೋಹನನೊಡನೆ, ಅನಗತ್ಯ ವಾಗಿ ಜಗಳವಾಡಿದುದು.

"ನೀನು ಸಿಕ್ಕಸಿಕ್ಕ ಕಡೆಯ ನೀರನ್ನು ಕದ್ದು ತಲೆಗಿಟ್ಟೇ ಕೈಲಾಸ ಕಾಣುತ್ತಿ! ಕ್ರಾಪ್ ಸುಂದರ!" ಎಂದನು ಕೇಶು.

ಆ ಚಿಕ್ಕ ಮಾತಿನಿಂದಲೇ ರಾಮಮೋಹನನು ಕೆರಳ ಬೇಕೆ?—"ನಿನಗೇನು? ನಿನ್ನ ಮನೆ ನೀರನ್ನು ಮುಟ್ಟಿದಾಗ ಮಾತ್ರ ನಿರ್ಬಂಧಮಾಡಿದರಾಯಿತು!" ಎಂದನು ಮೋಹನ.

"ಸ್ನೇಹಿತನೆಂದು ಹೇಳಿದೆ. ಕ್ರಾಪ್ ಬಿಡಿಸುವುದರಲ್ಲೆ ಜೀವನ ಕಳೆಯುತ್ತಿ; ಒಂದು ಕೆಲಸವಾದರೂ ನೋಡಿಲ್ಲ. ಸೊಗಸುಗಾರನಾಗಿಯೇ . . . ."

"ಮುಚ್ಚು ಬಾಯಿ. ನಿನಗೊಂದು ಹನ್ನೆರಡು ರೂಪಾಯಿಯ ತೊತ್ತಿನ ಕೆಲಸವಿದ್ದ ಮಾತ್ರಕ್ಕೆ ನಾವೆಲ್ಲ ಪೋಲಿಗಳಾಗಲಿಲ್ಲ. ಒಂದಾನೊಂದು ದಿನ ನಿನ್ನನ್ನು ನನ್ನ ಸೇವಕನಾಗಿ ಇಟ್ಟುಕೊಂಡು ಆಳುವ ಸುಯೋಗವು ನನಗೆ ಲಭಿಸದಿರದು!" ಎಂದು ಉಡಾಡಿ ಮಾತನ್ನಾಡಿದನು ಮೋಹನ.

ಕೇಶುವಿಗೆ ಈ ಮಾತಿನಿಂದ ಚೆನ್ನಾಗಿ ರೇಗಿತು. ಕೈ ಎತ್ತುವುದರಲ್ಲಿದ್ದನು. ಆದರೆ, ಏನೋ ಸ್ವಲ್ಪ ವಿವೇಕ ಮೂಡಿತು. ತಿರಸ್ಕಾರದಿಂದ ನಗುತ್ತ "ಆಗಲಣ್ಣಾ, ನೋಡುತ್ತಿರುವ!" ಎನ್ನುತ್ತ ಹೋದನು. ಅವರ ದೀರ್ಘಕಾಲದ ಸ್ನೇಹಬಂಧನವು ಅಲ್ಲೆ ಕಡಿದುಹೋಯಿತು.

ಸೂರ್ಯನು ನೂರಿಪ್ಪತ್ತು ಸಾರಿ ಮೂಡಿ, ನೂರಿಪ್ಪತ್ತು ಸಾರಿ ಮುಳುಗಿದನು. ಅಷ್ಟರೊಳಗೆ ಕೇಶವನ ಕೆಲಸವು ಹೋಗಿ ನಿರುದ್ಯೋಗಿಯಾಗಿದ್ದನು. ರಾಮಮೋಹನನು ಒಂದು ಛಾಪಖಾನೆಯಲ್ಲಿ ಮೇಲ್ವಿಚಾರಕ (Foreman).

ವಿಧಿಯು ಕೇಶವನನ್ನು ಆ ಛಾಪಖಾನೆಯ ಬಳಿಗೆ ಕರೆತಂದಿತು. ಕೇಶವನು ಕೆಲಸ ಬೇಡಿದ, ದೊರೆಯಿತು.

ಒಳಗೆ ಪ್ರವೇಶಿಸಿ ನೋಡಿದಾಗ—ತನ್ನ ಮೇಲ್ವಿಚಾರಕ ನಾಗಿ ರಾಮಮೋಹನ! ರಾಮಮೋಹನನ ಶಪಥವು ಕೈ ಗೂಡಿದ್ದಿತು!

"ನನ್ನ ಶಿಫಾರಸಿನಿಂದ ನಿನ್ನನ್ನು ಕೆಲಸಕ್ಕೆ ತೆಗೆದು ಕೊಂಡರು ಕೇಶು!" ಎಂದು ಅಣಕಿಸಿದನು ರಾಮಮೋಹನ! ಕೇಶುವಿನ ಮುಖವು ಲಜ್ಜೆಯಿಂದಲೂ ದುಃಖದಿಂದಲೂ ಬೆಳ್ಳಗಾಯಿತು. ಒಂದು ನಿಟ್ಟುಸಿರು ಬಿಟ್ಟನು.

ಹಿಂದಿನಿಂದ ಯಾರೋ ಬಂದ ಶಬ್ದವಾಯಿತು. ಇಬ್ಬರೂ ತಿರುಗಿ ನೋಡಿದರು. ಛಾಪಖಾನಾ ಮೆನೇಜರರು ನಿಂತುಕೊಂಡಿದ್ದರು! ಅವರ ಮುಖದ ಮೇಲೆ ನಗು!

"ರಾಮಮೋಹನ, ಕೇಶುವನ್ನು ಜರೆದಾಡುತ್ತಿಯಲ್ಲ! .... ನೀವಿಬ್ಬರೂ ನನ್ನ ಶಾಲಾಸಂಗಾತಿಗಳು; ನೆನಪಿರಲಿ!" ಎಂದರು ಮೆನೇಜರರು.

"ಆಹುದು; ಆದರೆ, ನಾನು ನಮ್ಮ ಹಿಂದಣ ಶರ್ತ ವೊಂದನ್ನು ನೆನಪು ಮಾಡಿಕೊಂಡೆನು, ಅಷ್ಟೆ!" ಎಂದು ದಿಟ್ಟ ತನದಿಂದ ನುಡಿದನು ಮೋಹನ.

"ನಾನು ಕೇಳಿರುತ್ತೇನೆ. ಆದರೆ ರಾಮಮೋಹನ! ನೀನು ನಿನ್ನ ಜಯದಲ್ಲೇ ಅತೀ ಕೀಳ್ತರದ ಅಪಜಯವನ್ನು ಹೊಂದಿರುವಿ!" ಎಂದರು ಮೆನೇಜರರು.

ರಾಮಮೋಹನನು ಪ್ರಶ್ನಾರ್ಥಕ ದೃಷ್ಟಿಯನ್ನಿತ್ತಿದನು.

"ನಾವು ಶಾಲೆಯಲ್ಲಿ ಒಟ್ಟಿಗೆ ಓದುತ್ತಿದ್ದಾಗ, ನೀನು ಕೇಶುವಿನೊಡನೆ ಹಾಕಿಕೊಂಡ ಶಪಥದಂತಹ ಒಂದು

ಶಪಥವೇ ನಮ್ಮೊಳಗೂ ಉಂಟಾಯಿತು. ಆಗ ನಾನು ದುರಹಂಕಾರದಿಂದ—'ನಿನ್ನನ್ನು ನನ್ನ ಸೇವೆಯಲ್ಲಿಟ್ಟು ಕೊಳ್ಳುವ ಯೋಗ್ಯತೆಯನ್ನು ಸಂಪಾದಿಸುವೆ' ಎಂದು ನಿನಗೆ ಹೇಳಿದ್ದೆ. ಅದರಂತೆ ನೀನಿಂದು ನನ್ನ ಸೇವಕನಾಗಿರುವಿ! ಕೇಶುವನ್ನು ಜರೆದಾಡಲು ನಿನಗಧಿಕಾರವೆಲ್ಲಿಯದು?"

ರಾಮುಮೋಹನನು ಲಜ್ಜೆಯಿಂದ ತಲೆವಾಗಿದನು. ಕೇಶುವು ವಿಸ್ಮಯದಿಂದ ನೋಡಿದನು. ಮೆನೇಜರರು ಮಾತ್ರ ಯಾವ ವಿಶಿಷ್ಟ ಭಾವವನ್ನೂ ಪ್ರದರ್ಶಿಸದೆ ಮೆಲ್ಲಗೆ,—

"ನಾನೂ . . . . ನನ್ನ ತಂದೆಯವರು ಯಾರನ್ನು ಒಮ್ಮೆ ತುಚ್ಛೀಕಾರದಿಂದ ಕಂಡಿದ್ದರೋ ಅವರಲ್ಲೇ ನೌಕರಿಗಿರುವವನು!" ಎಂದರು.

ಧನಿ ಯಾರು?

ಮೆನೇಜರರ ಮೇಲ್ವಿಚಾರಕರೊಡನೆ ವಿಚಾರಿಸುವುದೂ ಅನಗತ್ಯ. ಕಾರಣ, ಅವರು ಯಾರ ಆಳು ಎಂದು ಯಾರು ಬಲ್ಲ?



# ೧೨. ಬಲರಾಮನ ಪ್ರೇಮಬಲ.

ಶ್ರೀರಾಮಚಂದ್ರನು ಚಂದ್ರನಿಗಾಗಿ ಹಟಹಿಡಿದ ನೆಂದು ಓದಿರುವೆವು. ಬಲರಾಮನ ಚರಿತ್ರವನ್ನು ರಾಮ ಚಂದ್ರನ ಚರಿತ್ರಕ್ಕೆ ಹೋಲಿಸುವುದು ತಪ್ಪಾಗುವುದಾದರೂ, ಬಲರಾಮನೂ ಚಂದ್ರನಂತಹ ಒಂದು ವಸ್ತುವಿಗೇ ಕೈನೀಡಿದ ನೆಂಬುದರಿಂದ ಆ ಘಟನೆಯ ನೆನಪಾಯಿತು. ಚಂದ್ರನಿಗೂ ಬಲರಾಮನಿಗೂ ಭೇದವಿಷ್ಟು:–ಕನ್ನಡಿಯನ್ನು ಕೈಗೆ ಕೊಟ್ಟ ಕೂಡಲೇ ರಾಮಚಂದ್ರನು ಅಳುವನ್ನು ನಿಲ್ಲಿಸಿದನು. ಬಲ ರಾಮನು ಮಾತ್ರ, ಯಾವ ಕನ್ನಡಿಯನ್ನು ಎದುರು ಹಿಡಿದರೂ ಇನ್ನೂ ಕೂಗುತ್ತಲೇ ಇರುವನು.

ಬಲರಾಮನ ಚಂದ್ರನಾರು?

ಬಲರಾಮನು ಭಿಕಾರಿಯಲ್ಲವಾದರೂ, ಅದಕ್ಕಿಂತ ವಿಶೇಷ ಉತ್ತಮಸ್ಥಿತಿಯವನಲ್ಲ. ಸುಳ್ಳಾಗಲಿ ಸತ್ಯವಾಗಲಿ – ಲೆಕ್ಕ ಗಳನ್ನೇನೋ ಒಂದು ಅಂಗಡಿಯಲ್ಲಿ ಒರೆದು ದಿನಕ್ಕೆ ನಾಲ್ಕಾಣೆ ಗಳನ್ನು ಸಂಪಾದಿಸುತ್ತಿದ್ದನು. ಅವನು ಊಟಮಾಡುತ್ತಿದ್ದ ಹೊಟೇಲಿನ ವಠಾರದಲ್ಲೊಂದು ಬಾವಿ; ಅಲ್ಲಿ, ಅನಾಥನಂತೆ ನಿಂತು, ಬಲರಾಮನ ತಣ್ಣೀರ ಸ್ನಾನ. ಆ ಬಾವಿ ಬಳಿ ನಿಂತು ನೋಡಿದರೆ ಕರುಣಾಕರರಾಯರ ಮನೆ ಮುಂದಿನ ಜಗಲಿಯು ಕಾಣುವುದು ಕರುಣಾಕರರಾಯರ ಮಗಳು ಕಮಲೆ ಅಲ್ಲಿ ಕುಳಿತು, ಶಾಲಾಪಾಠಗಳನ್ನಭ್ಯಸಿಸುತ್ತಿದ್ದಳು. ಬಲರಾಮನು ಒಳೆಯನ್ನೊಮ್ಮೆ ನೋಡಿದನು. ನೋಡಿ,

ಆಕೆಯೂ ತನ್ನನ್ನು ನೋಡಿರಬಹುದೆಂದೂಹಿಸಿದನು. ಆ ಮೇಲೆ ಆಕೆಯ ಮೇಲೆ ಮೋಹಪಟ್ಟನು; ಆಕೆಯೂ ತನ್ನ ವಿಷಯವಾಗಿ ಅಂತಹ ಭಾವನೆಗಳನ್ನನುಭವಿಸುತ್ತಿರಬಹುದೆಂದೂಹಿಸಿದನು. ಬಲರಾಮನೆಂಬೊಂದು ಜೀವಿಯು ಅಸ್ತಿತ್ವದಲ್ಲಿರುವುದೆಂದು ಮಾತ್ರ ಕಮಲೆಗೆ—ಪಾಪ,—ತಿಳಿದಿರಲಿಲ್ಲ!

ಬಲರಾಮನು ಆಕೆಗೊಂದು ಪ್ರಣಯಪತ್ರ ಬರೆದನು! ತನ್ನ ಒಂದೂವರೆ ದಿನದ ಸಂಪಾದನೆಯನ್ನೆಲ್ಲ ಅಂಚೆಕಟ್ಟಿಗೆ ಕೊಟ್ಟು, ಈ ಪತ್ರವನ್ನೂ ಅವರ ಪೆಟ್ಟಿಗೆಗೊಪ್ಪಿಸಿದನು. ಆ ಮೇಲೆ . . . .

. . . . ಆ ಮೇಲೆ ನಾಲ್ಕು ದಿನಗಳ ತನಕ ಎದೆ ಬಡಿದಾಟದ ವೇಗವೇ ವೇಗ!

ನಾಲ್ಕು ದಿನಗಳಿಂದಲೂ ಅಂಗಡಿ ವೆಂಕಪ್ಪನು ಬಲರಾಮನ ಮುಖವನ್ನು ನೋಡಿ—ಹೀಗೇಕೆ ಕಂದಿದೆಯೆಂದು ವಿಸ್ಮಯಪಡುತ್ತಿದ್ದನು. ನಾಲ್ಕನೇ ದಿನ ಬೆಳಿಗ್ಗೆ ಅಂಚೆಯವನು—ಆ 'ರಿಜಿಸ್ಟರ್' ಪತ್ರವು ತಲಪಿತೆಂಬ ಕುರುಹಿನ ರಶೀದಿಯನ್ನು ತಂದು ವೆಂಕಪ್ಪನ ಕೈಗೆ ಕೊಡಲು,- ವಿಸ್ಮಯದಿಂದ ವೆಂಕಪ್ಪನು—"ರೇ, ಮುಂ—ಮಗ!" ಎಂಬ ಉದ್ಗಾರ ತೆಗೆದನು.

ಅಂದು ಬೆಳಿಗ್ಯೆ ರಜೆ ಪಡಕೊಂಡಿದ್ದ ಬಲರಾಮನು, ಸುಮಾರು ಹನ್ನೆರಡೂವರೆ ಘಂಟೆಗೆ ಸರಿಯಾಗಿ ಅಂಗಡಿಗೆ ಬಂದನು. ಮುಖವು ಬಾಡಿತ್ತು.

"ಮುಂ—ಮಗನೇ, ಏನುಮಾಡಿದೆ!" ಎಂದು ವೆಂಕಪ್ಪನು ಅಳುಮೋರೆ ಮಾಡಿ, ದುಃಖ—ಕ್ರೋಧಗಳಿಂದ ಕೇಳಿದನು.

ಬಲರಾಮನು ಹೇಗೂ ಕೆಲವು ಶಬ್ದಗಳನ್ನುಸುರಿದನು. ಪತ್ರ ಬರೆದುದಹುದೆಂದನು. ಇನ್ನು ಯಾವಾಗಲೂ ಬರೆಯೆನೆಂದನು. ಅಷ್ಟರಲ್ಲೆ ಆ ಕಮಲೆ ಆ ದಾರಿಯಾಗಿ ಶಾಲೆಯಿಂದ ಮನೆಗೆ ಮಧ್ಯಾಹ್ನ ಭೋಜನಕ್ಕಾಗಿ ಹೋದುದು ತೋರಿಬಂತು. ಆಗಲೇ....

"ಬಲರಾಮಾ, ಅನರ್ಥ! ಆಕೋ, ಆಕೆಯ ತಂದೆ ಬಂದನು! ನಿನ್ನನ್ನು ತಿವಿದು ಕೊಲ್ಲದೆ ಹೋಗೆನೆಂಬ ನಿರ್ಧಾರದಿಂದ ಬರುತ್ತಿರುವನೆಂದು ತೋರುವುದು! ಪತ್ರ ಮುಟ್ಟಿದುದನ್ನು, ಆ ಹುಡುಗಿ ಈಗ ಹೋಗಿ ತಂದೆಯೊಡನೆ ಕೊಟ್ಟಳೋ ಏನೋ!" ಎಂದು ವೆಂಕಪ್ಪನು ಗಾಬರಿಯಿಂದ ನುಡಿದನು. ಬಲರಾಮನು ಸರಕ್ಕನೆ ತಿರುಗಿ ನೋಡಿದನು. ರಾಮರಾಮ!—ಕರುಣಾಕರರಾಯರು ಸಮರಭೂಮಿಗೆ ಉನ್ಮತ್ತನಾಗಿ ಹೊರಟ ಸೇನಾನಿಯಂತೆ ಬರುತ್ತಿದ್ದರು!

ಎದುರಲ್ಲಿ ಹುಲಿ ಬರುವುದನ್ನು ಕಂಡರೆ ನೀವೇನು ಮಾಡುವಿರಿ?—ಗುಂಡುಹೊಡೆಯಬೇಕು ಅಥವಾ ಗುಂಡು ಹಾರಿದಂತೆ ನೀವೇ ಹಾರಿಹೋಗಬೇಕು. ಬಲರಾಮನು ಅದಕ್ಕಿಂತ ಹೆಚ್ಚಿನದೇನನ್ನೂ ಮಾಡಲಿಲ್ಲ. ಕುಳಿತಲ್ಲಿಂದ ಐದಡಿ ಕೆಳಗೆ ದಡಮ್ಮನೆ ಹಾರಿ, ವಾಯುವೇಗವೋ—ಮನೋವೇಗವೋ ಮತ್ತಾವ ವೇಗವೋ ಇದೆಯಲ್ಲ—ಹಾಗೆ ಬಿರುಸಾಗಿ ಓಡಿದನು.

ಎಲ್ಲಿಯ ತನಕ ಓಡಿದನೆಂದು ನೀವು ಕೇಳಬಹುದು. ಹೆಚ್ಚಿಲ್ಲ—ಪದವು ತನಕ! ಎರಡೂವರೆ ಮೈಲು!

ಪದವಿನ ರಾಮಯ್ಯಚೌಟರು ಒಂದು ಅಂಗಡಿಯಲ್ಲಿ ಕುಳಿತು ವೀಳ್ಯ ಜಗಿಯುತ್ತಿದ್ದಾಗ ಬಲರಾಮನ ಮೂರ್ತಿಯು ಬಂದು ದಡಮ್ಮನೆ ಅವರ ಕಾಲ ಮೇಲೆ ಬಿದ್ದು, “ಶರಣು” ಎಂದಿತು.

ಬಲರಾಮನ ತಾಯಿ ಮಡಿದಾಗಿನಿಂದ ಚೌಟರಿಗೆ ಬಲರಾಮನ ಮೇಲೆ ಒಂದು ಬಗೆಯ ಕರುಣೆ! (ಬಲರಾಮನು ಹಿಂದೊಮ್ಮೆ ಅವರ ಸರೆಕರೆಯವನಾಗಿದ್ದವನು.) ಬಲರಾಮನ ಚರಿತ್ರವನ್ನು ಕೇಳಿದರು. “ಇಷ್ಟು ದೂರಕ್ಕೆ ಹೇಗೆ ಓಡಿಬಂದಿಯಪ್ಪಾ!” ಎಂದರು. “ಕೇವಲ ಪ್ರೇಮದ ಬಲ!” ಎಂದನು ಬಲರಾಮು. ಚೌಟರು “ಹುಂ!” ಎನ್ನುತ್ತ, ಪೂರ್ವಸ್ಮರಣೆಯಲ್ಲಿ ಒಂದು ನಿಮಿಷ ತಲ್ಲೀನರಾಗಿ, ಆ ಮೇಲೆ “ಇನ್ನು ಹಾಗೆ ಮಾಡಬೇಡ. ಮನೆಗೆ ಹೋಗು. ಅವರು ಮುಂದೆ ನಿನ್ನನ್ನು ತಿವಿದುಹಾಕದಂತೆ ನಾನೇ ನೋಡುವೆನು!” ಎಂದು ಆಶ್ವಾಸನೆ ಇತ್ತರು. “ಆಗಬಹುದು.... ಒಂದಾಣೆ ಇದ್ದರೆ ಕೊಡಿ, ಕಾಫಿ ಕುಡಿದಿಲ್ಲ” ಎಂದನು ಬಲರಾಮು. “ಚಿಲ್ಲರೆ ಇಲ್ಲ; ಹೋಗು ಮಗು” ಎಂದು ಚೌಟರು ಚಿಕ್ಕಾಸು ಕೊಡದೆ, ಈ ಕೂಸನ್ನು ಆ ಬಿಸಿಲಲ್ಲಿ ಬಂದ ಹಾಗೇ ಕಳುಹಿಸಿದರು!

ಕರುಣಾಕರರವರು ಏನು ಮಾಡಿದರು?

ಮಾಡುವುದೇನು?—ಕ್ಷೌರಿಕನು ಅಪರಾಹ್ನ ಒಂದರ ತನಕ ಬಾರದಿದ್ದುದಕ್ಕೆ ಕೋಪಗೊಂಡು, ಅವರು ಸ್ವತಃ

ಆತನನ್ನು ಹುಡುಕಿ ಹೊರಟಿದ್ದರಂತೆ! ಬಲರಾಮನೆಂಬವನೊಬ್ಬನು ತನ್ನ ಮುದ್ದು ಕುವರಿಗೆ ಪತ್ರ ಬರೆದು ಮಹಾ ಕಸಿವಿಸಿಗೊಳಗಾಗಿರುವನೆಂದು ಅವರಿಗೆ ಕನಸು ಕೂಡ ಇಲ್ಲ!

ಬಲರಾಮನಿಗೆ ಮುಂದೇನಾಯಿತು ಎಂದು ಹೇಳುವುದು ಅನಾವಶ್ಯಕ ಆದರೂ ಇವೆರಡು ಮಾತು:—ಅಂದು ರಾತ್ರಿಯಾಗದೆ ಆತನು ನಗರದೊಳಗೆ ಕಾಲಿಡಲಿಲ್ಲ. ನಗರಕ್ಕೆ ಬರುತ್ತಲೇ, ವೆಂಕಪ್ಪನು ಆತನ ತಲೆಗೆರಡು ಚಿಕ್ಕ "ಕುಟ್ಟಿ"ಗಳನ್ನು ಕೊಟ್ಟು, "ನಿನಗೆ ನಾಳೆಯಿಂದ ಶಾಶ್ವತ ರಜೆ!" ಎಂದನು. "ಕುಟ್ಟಿ"ಯಿಂದಲೂ "ನಿವೃತ್ತಿ"ಯಿಂದಲೂ ಚಿಕಿತ್ಸೆ ಹೊಂದದ ಬಲರಾಮನು ಇಂದೂ, ತೀರದ ಆಸೆಯೊಂದನ್ನು ಹೃದಯದೊಳಗಿರಿಸಿಕೊಂಡು ಅಲೆಯುತ್ತಿರುವನು. ಅವನ ಆ ಪತ್ರವನ್ನು ಪಡೆದು, ಓದದೆ ಸುಟ್ಟುಬಿಟ್ಟ ಕಮಲೆಯು,—"ಬಲರಾಮನೆಂಬ ಈ ಹುಲುಜೀವಿಯು ನನಗೆ ಕಂಡುಬಂದರೆ ಒಂದು ಕೆನ್ನೆ ಏಟಿನಿಂದಲೇ ಅದನ್ನು ತಿದ್ದಿ ಪರಮಾತ್ಮನ ವಶಕ್ಕೊಪ್ಪಿಸುವೆನು!" ಎಂದಿರುವಳಂತೆ. ಅದನ್ನೆಲ್ಲಿಯೋ ಕೇಳಿದ ಬಲರಾಮನಿಗೆ, ತನ್ನ ಪ್ರೇಮದ ಮೇಲಿರುವಷ್ಟೆ ಭರವಸೆಯು ಆಕೆಯ ಮಾತಿನಲ್ಲೂ ಇರುವುದಾದ ಕಾರಣ, ಪ್ರೇಮಬಲವನ್ನು ಕೆನ್ನೆಯೇಟಿನ ಬಲದ ಮುಂದೆ ಸ್ಪರ್ಧೆಗಿಡಲಾಗದೆಂದು ಮೌನವಾಗಿರುವನು.



# ೧೩. ವೆಂಕಟಗಿರಿ ಮಹಾತ್ಮೆ.

ಊರಿನ ಎಲ್ಲ ರಸ್ತೆಗಳಲ್ಲಿಯೂ ವಿದ್ಯಾರ್ಥಿಗಳೂ ವಿದ್ಯಾರ್ಥಿನಿಗಳೂ ನಡೆದು ಹೋಗುತ್ತಿರುವರು. ಅದೇನು ವಿಚಿತ್ರವಾಗಿಲ್ಲವಾಗಿರಬಹುದು. ಆದರೆ, ವಿದ್ಯಾರ್ಥಿನಿಗಳೇ ಹೆಚ್ಚಾಗಿ ಹಾದು ಹೋಗುತ್ತಿರುವ ರಸ್ತೆಯೊಂದನ್ನು ಹುಡುಕಿ, ಅಲ್ಲೊಂದು ಔಷಧಾಲಯವನ್ನು ನಮ್ಮ ಪಂಡಿತ ವೆಂಕಟಗಿರಿಯವರು ತೆರೆದುದು ಮಾತ್ರ ವಿಚಿತ್ರ. ಇವರಿದ್ದಲ್ಲಿ ಹವೆಯು ಉತ್ತಮವಾಗಿತ್ತೆಂದೇ ರೋಗರುಜೆಗಳು ಕಡಮೆ ಯಾಗಿದ್ದಿರಬಹುದು. ಅದುಕಾರಣವೇ ಯಾವ ಬಗೆಯ ಯಾವ ರೋಗಿಗಳೂ ಇವರ ಚಿಕಿತ್ಸಾಲಯದಲ್ಲಿ ಕಾಲಿಡು ತ್ತಿರಲಿಲ್ಲ. ಈ ಪಂಡಿತರ ಗುಣ ನಡತೆ ಒಳ್ಳೆಯದಲ್ಲವೆಂಬ ಕಾರಣದಿಂದಲೇ ಹಾಗಾಗಿರಬೇಕೆಂದು ಜನರನ್ನುತಿದ್ದರು. ಆದರೆ, ರೋಗಿಗಳೇ ಅಲ್ಲಿ ಒಂದು ಮೈಲು ಫಾಸಲೆ ಯೊಳಗಿಲ್ಲದ ಕಾರಣವಾಗಿರಬಾರದೇಕೆ ಎಂಬ ಪ್ರಶ್ನೆ ಯೊಂದೂ ನಮ್ಮ ತಲೆಯಲ್ಲಿ ಸುಳಿದಾಡುತ್ತಿದೆ.

ಆದರೆ, ಇವರ ಕವಾಟಿನಲ್ಲಿ "ಆಯುರ್ವೇದ ಸಾರ" ಗ್ರಂಥವೊಂದಿತ್ತು. ಕೆಲವು ಬಾಟಲಿಗಳೂ ಇದ್ದವು. ಬಾಟ ಲಿಯೊಳಗೆ ಔಷಧವೆಂಬ ನೀರೂ, ಹೊರಗೆ "ಲೇಬಲ್ಲೂ" ಇದ್ದವು. "ಡಿಗ್ರಿ"? . . . . ಡಿಗ್ರಿ ಏಕೆ?

ರೋಗಿಗಳು ಬಾರದಿದ್ದುದರಿಂದ ವೆಂಕಟಗಿರಿಯವರಿಗೆ ತಮ್ಮ ಔಷಧಾಲಯದಲ್ಲಿ ಕುಳಿತು ಬೇಕಾದಷ್ಟು ಆಲೋಚ ನೆಗಳಲ್ಲಿ ತೇಲಾಡಲು ಸಮಯವಿದ್ದಿತು. ದೇವರು ಕೊಟ್ಟ

ಎರಡು ಕಣ್ಣುಗಳಿಂದ ಇವರು ವಿದ್ಯಾರ್ಥಿನಿಗಳನ್ನು ಮಾತ್ರ ಚೆನ್ನಾಗಿ ದೃಷ್ಟಿಸಿ, ಒಂದಾನೊಂದು ದಿನ ಮುಕ್ತಿ ಎಂಬ ವಳೇ ತನಗೆ ಪತ್ನಿಯಾಗಲು ಯೋಗ್ಯಳಿರುವಳೆಂಬ ಶೋಧ ಮಾಡಿದರು.

ದೈಹಿಕವಾದ ರೋಗಗಳೇನೂ ಇಲ್ಲದವರಿಗೆ ಮಾನ ಸಿಕ ರೋಗವಿರುವುದುಂಟು. ಪಂಡಿತರಿದ್ದ ಕೇರಿಯ ದಾಕ್ಷಾಯಿಣಿಬಾಯಿಗೆ ಇಂತಹ ಒಂದು ವಿಧದ ಮಾನಸಿಕ ರೋಗವುಂಟಾಗಿತ್ತು. ವೆಂಕಟಗಿರಿಯವರೇ ಚಿಕಿತ್ಸೆಗಾರಂಭಿ ಸಿದ್ದರು. ಗಿರಿಯವರು ತಮ್ಮ ಅದ್ಭುತ ಶೋಧವನ್ನು ದಾಕ್ಷಾಯಿಣಿಗೆ ತಿಳಿಸಿದರು.

ದಾಕ್ಷಾಯಿಣಿಯು, ಊರಿನ ಸೇಕಡಾ 60ರಷ್ಟು ಕುಟುಂಬಗಳನ್ನು ಬಲ್ಲವಳು. ಮುಕ್ತಿಯ ತಾಯ್ತಂದೆಗಳ ನ್ನಾಕೆ ಚೆನ್ನಾಗಿ ಬಲ್ಲವಳಾಗಿದ್ದಳೆಂಬುದರಿಂದ ಪಂಡಿತರಿಗೆ ಪರಮಾನಂದವಾಯಿತು.

ಮುಕ್ತಿಯ ತಾಯಿಯು ಮಧ್ಯಾಹ್ನ ಭೋಜನಕ್ಕೆ ಕುಳಿತಿದ್ದಾಗ ದಾಕ್ಷಾಯಿಣಿಯ ಆಗಮನವಾಯಿತು. ಬಾಯಿಯು ಗಿರಿಯವರ ಮನೋಗತವನ್ನು ತಿಳಿಸಿದಳು. ಮುಕ್ತಿಯ ತಾಯಿಗೆ ಆಗಲೇ ಹಸಿವು ಮುಗಿಯಿತು. ಸಂತೋ ಷದಿಂದ ಕೈತೊಳೆದೆದ್ದು, ಒಂದು ಒಳ್ಳೇ ಸೀರೆಯನ್ನುಡುವ ಸಂಭ್ರಮಕ್ಕೆ ತೊಡಗದೆ, ಹರಕು ಸೀರೆಯಲ್ಲೆ, ಆ ನಡು ಹೊತ್ತಿನ ಬಿಸಿಲಲ್ಲಿ, ತನ್ನ ಚಿಕ್ಕಪ್ಪ ಮುಕುಂದಯ್ಯರವರಲ್ಲಿಗೆ "ಎರಡ್ಕಾಲೋಟ" (ನಾಗಾಲೋಟದ ನಂತರ ಪ್ರಸಿದ್ಧವಾ ದುದು) ದಿಂದ ಓಡಿದಳು.

ಮುಕುಂದಯ್ಯನವರು ವಯೋವೃದ್ಧರು. ಇವರು, ತಮ್ಮ 70 ವಯಸ್ಸಿನ ಜೀವಮಾನದಲ್ಲಿ ಸುಮಾರು 130 ಜೋಡು ಮಂದಿಗೆ ವಿವಾಹಬಂಧನದಲ್ಲಿ ಸಿಲುಕಿಸಿ ಕೋಟಿ ಕೋಟಿ ಅಶ್ವಮೇಧಗಳ ಪುಣ್ಯ ಸಂಪಾದಿಸಿದವರು. ಇನ್ನೂ ಕೆಲವರ್ಷ ಬದುಕಿ ಉಳಿದರೆ ಮತ್ತೆ ಕೆಲವು ಕೋಟಿ ಮೇಧ ಗಳ ಪುಣ್ಯದ ಮೊತ್ತವನ್ನು ಕೂಡಿಡುವ ಕಾರ್ಯೋತ್ಸಾಹ ವಿದ್ದವರು. ಇವರ ಬಳಿಗೆ ಬಂದು ಕುಳಿತು ನಾಗಮ್ಮನು (ಮುಕ್ತಿಯ ಮಾತೃ), ಚಿಕ್ಕಪ್ಪಾ,—'ಪಂಡಿತ ವೆಂಕಟಗಿರಿ ಯವರು—ಮುಕ್ತಿ—' ಎಂದು ನೋಲುಸಿರಿಂದ ನುಡಿದಳು.

ಪಂಡಿತರು ಮುಕುಂದಯ್ಯನ ಅಂಗಡಿಯಿಂದ ಕೊಂಡು ಹೋದ ಅಕ್ಕಿಮುಡಿಗಳ ಲೆಕ್ಕವಿನ್ನೂ ಸಂದಾಯವಾಗಿರಲಿಲ್ಲ. 'ಪಂಡಿತರು—ಮುಕ್ತಿ—'ಎನ್ನುತ್ತಲೇ ಮುದುಕನಿಗೆ ಭೂಕಂಪವಾದಂತೆ ಭಾಸವಾಯಿತು. ತನ್ನ ಅಕ್ಕಿಮುಡಿಯ ದುಡ್ಡನ್ನು ಕೊಡದೆ ಯಾರಿಗೂ ಮುಕ್ತಿಹೊಂದುವ ಅಧಿಕಾರ ವಿಲ್ಲವೆಂದೇ ಅವರ ಸಿಶ್ಚಿತಾಭಿಪ್ರಾಯ.

'ಯಾವಾಗ?'

'. . . ನಮ್ಮ ಮುಕ್ತಿ ಹೋಗುತ್ತಿದ್ದಾಗ . . .'

"ಸ್! ನಿನ್ನ ಮಗಳು ಮುಕ್ತಿ!" ಎಂದರು ಮುಕುಂದ ಯ್ಯನವರು.

"ಅಹುದು. ಪಂಡಿತರು ಯಾವಾಗಲೂ ನೋಡುತ್ತಿ ದ್ದರೆಂದು ತೋರುವುದು. ಮೊನ್ನೆ ಶಾಲೆಯಲ್ಲಿ ಬೆಸ್ತರವಳ ವೇಷ ಹಾಕಿದ್ದಳು. ಕಣ್ಣಿಗೊಂದು ಕನ್ನಡಕವೂ ಇದೆಯ

ಲ್ಲವೇ ಚಿಕ್ಕಪ್ಪಾ ಅವಳಿಗೆ!—ಇವರು ಆ ವೇಷ ನೋಡಿರ ಬೇಕು. ನೀನೂ ನೋಡಬೇಕಿತ್ತಾ ವೇಷ—'ಏನು ಬೇಕೆ?' ಎಂದು! . . . . ಏನು ಹೇಳುತ್ತಿ ಚಿಕ್ಕಪ್ಪಾ, ಪಂಡಿತರು ನನ್ನ ಮಗಳನ್ನಪೇಕ್ಷಿಸುತ್ತಾರೆ. ಆಕೆಯ ರೂಪ ನೋಡಿ ಮೆಚ್ಚಿದ್ದಾರೆ. ನಿನ್ನ ಅಭಿಪ್ರಾಯವೇನು?"

"ಪರಮಾತ್ಮ!" ಎಂದರು ಮುಕುಂದಯ್ಯನವರು. ಅಪಸ್ಮಾರದ ಚಿಹ್ನೆ!

'ಚಿಕ್ಕಪ್ಪಾ . . . . !'

'ಮಗಳೇ!'

'ಏನು ಚಿಕ್ಕಪ್ಪಾ?'

'ನೀನು ಅಮೇರಿಕನ್ ಕಳ್ಳರ ಕತೆ ಓದಿರುವಿಯಾ ಮಗಳೇ?'

'ಇಲ್ಲ ಚಿಕ್ಕಪ್ಪಾ. ನನಗೆ ಇಂಗ್ಲೀಷ್ ಬರೋದಿಲ್ಲ.'

'ಬೇಡ—ಅಗತ್ಯವಿಲ್ಲ. ಈ ಪಂಡಿತ ವೆಂಕಟಗಿರಿಯವರು ಒಬ್ಬ ಅಮೇರಿಕನ್ ಕಳ್ಳ!'

'ಹಾಗೆಂದರೆ?'

'ಕೇಳು ಮಗಳೇ,—ಕಳ್ಳನೆಂದರೆ ಕನ್ನಹಾಕಿ ಕದಿಯುವವನೆಂದರ್ಥದಲ್ಲಿ ಹೇಳಿಲ್ಲ. ಇವರು ಈ ದಿನ ಬೆಳಗ್ಗೆ, ದಾಕ್ಷಾಯಿಣಿ ಬಾಯಿಯೊಡನೆ ನನಗೊಂದು ಶುಭವಾರ್ತೆ ಕಳುಹಿಸಿದ್ದಾರೆ. ನಮ್ಮ ಶೀನೂವಿನ ಮಗಳನ್ನು ನೋಡಿ ಮೆಚ್ಚಿರುವರಂತೆ!'

'ನನ್ನ ಮುಕ್ತಿ . . . . ?'

'ನಿನ್ನ ಮುಕ್ತಿ—ನನ್ನ ನಳಿನಿ—ಮತ್ತು ಇನ್ನೆಷ್ಟು ಮಂದಿಗೆ ಇಂತಹ ಸುದ್ದಿ ಕಳುಹಿರುವರೋ ಯಾರಿಗೆ ಗೊತ್ತು. ಈ ದಿನ ಮಾತ್ರ, ಮಧ್ಯಾಹ್ನದೊಳಗೆ ಇಬ್ಬರನ್ನು ನೋಡಿ ಮೆಚ್ಚಿದರೆಂದು ಗೊತ್ತಾಯಿತು. . . . . ಇವರಿಗೆ ಮದುವೆಯ ಹುಚ್ಚು ಹಿಡಿದಿದೆ ನಾಗೂ!'

'ಇಂತಹ ರಾಕ್ಷಸ!'

'ನೀನು ಬರುವ ಸ್ವಲ್ಪ ಮುಂಚಿತವಾಗಿ ಇವರ ಸುದ್ದಿ ಕೇಳಿದೆ ಇವರಿಗೆ ಈ ಮೊದಲು ಮೂರು ವಿವಾಹಗಳಾಗಿವೆಯಂತೆ!'

'ಮೂರು?'

'ಅಹುದು, ಮೂರು! ಇನ್ನು ಸ್ವಲ್ಪ ಸಮಯ ಇವರು ಯಾವುದಾದರೂ ಒಂದು ಲೇಹದ ಬಲದಿಂದ ಬದುಕಿ ಉಳಿಯುವುದಾದರೆ ನೂರು ಮಾಡದೆ ಇರರು. ಆ ಮದುವೆಗಳ ಮೋಜು ಕೇಳಿದ್ದೀಯಾ?—ನಂಬ್ರ 1ನೇ ಮದುವೆ ಹಿಂದೂ ಶಾಸ್ತ್ರೋಕ್ತ ವಿಧಿಯಂತೆ ಎಂಟು ದಿನ ವೈಭವದಿಂದ ಜರಗಿತು; ಹೆಂಡತಿ ಮೂರು ವರ್ಷಗಳಲ್ಲಿ, ಪುನಃ ಜನನಕ್ಕೆ ಬರಲಾರದಷ್ಟು ಪೀಡೆ ಪಡೆದು ಸತ್ತಳು. ನಂಬ್ರ 2ನೇ ಮದುವೆ ಲೂಯಿಸ್ ಕೇರಿಯ ಮಿಸ್ ಮಾಣಿಕ್ಯಳೊಡನೆ ಸಿವಿಲ್ ಮ್ಯಾರೇಜ್ ಆಕ್ಟ್ ಎಂಬ ಸರ್ವ ಸುಖಪ್ರದಾಯಕ ಸರ್ವಾನುಕೂಲ ಶಾಸನದಂತೆ ನಡೆದುದು; ಈ ಹೆಂಡತಿಯ ಜಾತಿಯಾವುದೆಂದು ('ಸ್ತ್ರೀ' ಎಂಬುದರ ಹೊರತು) ಇನ್ನೂ ನಿರ್ಣ

ಯವಾಗಿಲ್ಲ. ನಂಬ್ರ 3ನೇ ಮದುವೆ ದುಷ್ಯಂತನಂತೆ ಗಾಂಧರ್ವ ವಿಧಿಯಂತೆ ನಡೆದುದು. ಪುರೋಹಿತರಿಲ್ಲ. ಆದರೆ, ಈ ಶಕುಂತಳೆ ಮಾತ್ರ ವಿವಾಹವಾದ ಒಂದು ವರುಷದೊಳಗೆ ಆತನ ಹೃದಯಮಂದಿರದಿಂದ ರಿಟಾಯರ್ ಆದಳು; ಅದರೊಂದಿಗೆ ತನ್ನ ಮಿದುಳಿನೊಂದಿಗೇ ರಿಟಾಯರ್ ಆಗಿದ್ದಾಳೆ; ಇನ್ನು ಸ್ವಲ್ಪ ಸಮಯದಲ್ಲಿ ಪ್ರಪಂಚದಿಂದಲೇ ರಿಟಾಯರ್ ಆಗುವ ಲಕ್ಷಣಗಳಿವೆ! ಇನ್ನು ನಿನ್ನ ಮುಕ್ತಿಗೂ ಒಂದು ಮುಕ್ತಿ ತೋರಿಸುವೆಯೋನಮ್ಮ?'

ನಾಗಮ್ಮನು ಶಿಲಾಪ್ರತಿಮೆಯಂತಾಗಿದ್ದಳು. 'ಹಾಗಾದರೆ, ಈ ಪಂಡಿತರಿಗೆ ಹೃದಯವೆಂಬುದೇ ಇಲ್ಲವೇ?' ಎಂದಳು.

'ತಲೆ ಮಾತ್ರವಿದೆ; ಹೃದಯವಿಲ್ಲ!' ಎಂದರು ಮುಕುಂದಯ್ಯನವರು.



# ೧೪. ಶ್ರೀಮಂತಿಕೆಯ ಬಂಗಾರ.

ಶ್ರೀಮಂತಿಕೆಗೂ ಬಂಗಾರಕ್ಕೂ ಬಹಳ ನಂಟು. ಅದರಿಂದಲೇ,—ನರಸಿಂಗರಾಯರು ಮಂದಯ್ಯನಿಗೆ ಬಂಗಾರದ ಪದಕವನ್ನು ಕೊಡುವೆನೆಂದು ಮಾತುಕೊಟ್ಟುದು.

ಮಂದಯ್ಯ ಹಾರ್ಮೋನಿಯಂ ವಾದನದಲ್ಲಿ ನಿಪುಣ. ಒಂದು ವರುಷದ ಬಾಲಕನಾಗಿದ್ದಾಗಲಿಂದ ಹಾರ್ಮೋನಿಯಂ ಪೆಟ್ಟಿಗೆಯ ಮೇಲೆಯೇ ಬೆಳೆದವನು. ಅವನು ಹಾರ್ಮೋನಿಯಂ ಪೆಟ್ಟಿಗೆಯನ್ನು ತೆರೆದು, ಆ ಕರಿ—ಬಿಳಿ ಕಡ್ಡಿಗಳ ಮೇಲೆ ತನ್ನ ಕೈಬೆರಳುಗಳನ್ನಾಡಿಸಿದನೆಂದರೆ ಹೊರಡುವ ಆ ಸ್ವರವೇ ಬೇರೆ. ನೀವೂ ಹಾಗೆಯೇ ಬೆರಳುಗಳನ್ನಾಡಿಸಿದರೆ ಹೊರಡುವ ಸ್ವರವೇ ಬೇರೆ! 'ಅವ ಹುಟ್ಟು ಸಂಗೀತಗಾರ'ನೆನ್ನುತ್ತಿದ್ದರು ಜನರು. ನಿಜ. ಭೂಗತವಾದ ಶಿಶುಗಳು ಅಳುವಾಗ ಅದರಲ್ಲೊಂದು ಗಾನಮಾಧುರ್ಯವಿದೆ. ಆದರೆ, ಅದನ್ನರಿಯದ ನೀವು ಬೆಲ್ಲದ ನೀರಿನಲ್ಲಿ ಅದ್ದಿದ ಬತ್ತಿಯನ್ನು ಅದರ ಬಾಯಿಗಿಟ್ಟು ಆ ಸಂಗೀತ ಜ್ಞಾನವನ್ನು ಹುಟ್ಟಿದಾಗಲೇ ವಿರೂಪಪಡಿಸುವಿರಿ. ಮಂದಯ್ಯನ ಬಾಯಿಗೆ ಬೆಲ್ಲದಬತ್ತಿ ಕೊಟ್ಟವರಿಲ್ಲ; ಕೈಬೆರಳುಗಳನ್ನು ಮಣ್ಣಿನಲ್ಲಿ ಆಡಿದಾಗ ತೊಳೆದು ಆರೈಕೆ ನೋಡಿದವರಿಲ್ಲ. ತನ್ನಿಷ್ಟಕ್ಕೆ ಹುಟ್ಟಿ, ತನ್ನಿಷ್ಟಕ್ಕೆ ಬೆಳೆದು, ತನ್ನಿಷ್ಟಕ್ಕೇ ಸಂಗೀತಜ್ಞನೆನಿಸಿದನು.

ನರಸಿಂಗರಾಯರೆಂದರೆ— ಸಾರ್ವಜನಿಕಸೇವಾಕಾಂಕ್ಷಿಗಳು. ಶಾಲೆಯಲ್ಲಿ ತಾನು ಈ ಯುಗ ಕಳೆದರೂ ತೇರ್ಗಡೆ

ಹೊಂದುವಂತಿಲ್ಲವೆಂದು ತಿಳಿದ ಇವರು ತಮ್ಮ ಅಸ್ತಿತ್ವವನ್ನು ಜಗತ್ತಿನಲ್ಲಿ ಕೆಲವರಾದರೂ ಗುರುತಿಸಲೆಂದು, 1931ನೇ ಇಸವಿಯಲ್ಲಿ ಒಮ್ಮೆ ಉಪ್ಪುಮಾಡಿದ್ದರು; 1932ರಲ್ಲಿ ಮೈದಾನಿನ ಸಾರ್ವಜನಿಕ ಸಭೆಯಲ್ಲಿ ಗ್ಯಾಸ್‌ಲ್ಯಾಟ್ ಹಿಡಿದು ನಿಂತಿದ್ದರು; ತಾಲೂಕು ಕೊಂಗ್ರೆಸ್ ಕಮಿಟಿ ಅಧ್ಯಕ್ಷರ ದಫ್ತರನ್ನು ಅವರ ಮನೆಯಿಂದ ಕಚೇರಿಗೂ, ಕಚೇರಿಯಿಂದ ಮನೆಗೂ ಒಯ್ದುಕೊಟ್ಟು,—'ನೋಡಿ! ಒಂದಿಷ್ಟು ಗರ್ವವೆಂಬುದಿಲ್ಲ ಹುಡುಗನಿಗೆ! ಆಡಂಬರವಿಲ್ಲದವನು! ದೇಶಭಕ್ತ!' ಎಂದು ಜನರಿಂದ ಉದ್ಗಾರ ಹೊರಡುವಂತೆ ಮಾಡಿದ ಪರಾಕ್ರಮಿ! 1933ರೊಳಗೆ ಕೊಂಗ್ರೆಸ್ ಕೆಲಸಗಾರರೆಲ್ಲ ಕಣ್ಣಾನೂರು, ಕೊಯಮುತ್ತೂರು ಮತ್ತು ವೆಲ್ಲೂರು ಜೈಲುಗಳಿಗೆ ಹಂಚಿಹೋಗಲು, ನಮ್ಮೂರಲ್ಲಿ ಉಳಿದ ಇವರೊಬ್ಬರು— ತಮಗಾವ ವೃತ್ತಿಯೂ ಇಲ್ಲದುದಕ್ಕೆ ನೊಂದು, 'ದಗ್ಧಹೃದಯ' ಎಂಬ ನಾಟಕವನ್ನು ಆಡಿಸಬೇಕೆಂದು, ಫಕ್ಕನೆ ಒಂದು ದಿನ ನಿರ್ಧರಿಸಿದರು.

ಊರಿನ ಜನರ ಹೃದಯಗಳೆಲ್ಲ ಒಂದಲ್ಲ ಒಂದು ಕಾರಣದಿಂದ ಸದಾ ಉರಿಯುತ್ತಿರುವುವೆಂಬುದು ಖಂಡಿತವಾದ ಕಾರಣ— 'ದಗ್ಧಹೃದಯಾ'ಭಿನಯವು ಜನರ ಮೆಚ್ಚುಗೆ ಪಡೆವುದೆಂದೇ ಇವರ ಭರವಸೆ. ಆಗಲೀಗ ಅವರು ಮುಂದಯ್ಯನನ್ನು ಹಾರ್ಮೋನಿಯಮ್ ಬಾರಿಸಲು ಕರೆತರಿಸಿದುದು.

ಮುಂದಯ್ಯನಿಗೆ ಒಂದು ಆಸೆಯೆಂದರೆ— ಸಾರ್ವಜನಿಕ ಸಭೆಯಲ್ಲಿ ಒಂದು ಸ್ವರ್ಣಪದಕವನ್ನು ಪಡೆಯಬೇಕೆಂದು! ನರಸಿಂಗರಾಯರು ಮುಂದಯ್ಯನ ಈ ಮರ್ಮಸ್ಥಾನವನ್ನು ತಿಳಿದು, ಅಲ್ಲಿಗೇ ಚಿಟಿಕಿ ಹೊಡೆದರು. ಮುಂದಯ್ಯನು ಒಪ್ಪಿದನು.

ನಾಟಕಾರಂಭದ ದಿನದ ವರೆಗೆ (ಒಟ್ಟು ಹದಿನೈದು ದಿನ) ಟಿಕೇಟು ಮಾರಾಟ ನಡೆಯಿತು. ಊರಿನ ಜನರ ಹೃದಯಗಳೆಲ್ಲ ಸುಟ್ಟುಹೋಗಿರುವುದು ನಿಜವಾಗಿರಬೇಕು. ಇಲ್ಲದಿದ್ದರೆ ನರಸಿಂಗರಾಯರಿಗೆ 57 ರೂಪಾಯಿಗಳು ಮಾತ್ರ ಕೂಡಿಕೆಯಾಗಲು ಕಾರಣವೇನು?—"ಸುಟ್ಟ ಜನರು!" ಎಂದುಕೊಂಡರು ನರಸಿಂಗರಾಯರು. ಮುಂದಯ್ಯನಿಗಾಗಿ ಒಂದು ಪದಕವನ್ನೂ ತಯಾರಿಸಿ ಕೊಟ್ಟುದಾಯಿತು. ನಾಟಕದ ನಡುವೆ ಪದಕವು ಅರ್ಪಿಸಲಾಯಿತು. ನಾಟಕವು ಮುಗಿಯಿತು. ನೋಡಿದ ಜನರು ತಮ್ಮ ಹೃದಯವನ್ನೆಲ್ಲ ಪೂರ್ಣವಾಗಿ ಸುಟ್ಟುಕೊಂಡಿದ್ದರಾದ ಕಾರಣ ಮನೆಗೆ ತೆರಳುವಾಗ ಬೆಂಕಿಯನ್ನೇ ಕಾರುತ್ತ ಹೋದರು.

ಮರುದಿನ ಮುಂದಯ್ಯನು, ತನಗೆ ದೊರೆತ ಪದಕವನ್ನು ಅಂಗಿಗೆ ಸಿಕ್ಕಿಸಿ, ಯಾವನೊಬ್ಬ ಮೊಗಲ್ ಬಾದಷಹನಂತೆ ಹೆಜ್ಜೆಯಿಟ್ಟು ನಡೆಯುತ್ತಿರಲು,—ಮಿತ್ರಬೈಲಿನ ರಾಮಪ್ಪಾಚಾರಿಯು ತಟ್ಟನೆ ಅಂಗಡಿಯಿಂದ ಕೆಳಗೆ ಹಾರಿ, ಮುಂದಯ್ಯನ ಎದುರು ನಿಂತು, "ನಮಸ್ಕಾರ!" ಎಂದನು.

ಮುಂದಯ್ಯನು ಆಚಾರಿಯನ್ನು ಪರಿಚಯದ ಮುಗುಳ್ನಗೆಯಿಂದ ದೃಷ್ಟಿಸಿ—"ನಮಸ್ಕಾರ!" ಎಂದುತ್ತರವಿತ್ತು, ತನ್ನ ಅಂಗಿಯ ಮೇಲೆ ನೇತಾಡುವ ಪದಕವನ್ನು ಗೌರವದಿಂದ ನೋಡುತ್ತ, "ನಿನ್ನೆ ರಾತ್ರೆ—ನಾಟಕ—ಹಾರ್ಮೋನಿಯಮ್—ತಿಳಿಯಿತೇ?" ಎಂದನು.

ಆಚಾರಿಯು ವ್ಯಂಗ್ಯವಾಗಿ ನಗುತ್ತ "ಮುಂದಯ್ಯನವರೇ, ನೀವು ನನ್ನ ಮಿತ್ರ! ಇದನ್ನು ನಿಮಗೇ ಕೊಟ್ಟರೇ?" ಎಂದು ಪ್ರಶ್ನಿಸಲು,—

"ಅಹುದೆ"ಂದು ಅಬ್ಬರದ ಉತ್ತರ!

ರಾಮಪ್ಪಾಚಾರಿಯು ಚಟ್ಟನೆ,—"ಅದು ಗಿಲಿಟು ಸ್ವಾಮಿ; ಮೊನ್ನೆ ನಾನೇ ಮಾಡಿಕೊಟ್ಟದು—ಒಂದೂವರೆ ರೂಪಾಯಿ ಬೆಲೆ!" ಎಂದನು.

ಆಚಾರಿಯು ಮತ್ತೆ ಏನು ಹೇಳಿದನೋ ಅದನ್ನು ಮುಂದಯ್ಯನು ಕೇಳಲಿಲ್ಲ. ಲಂಡನಿನಲ್ಲೀಗ ಒಂದು ಭಾರೀ ರೈಲುಬಂಡಿಯಾಗಿದೆಯಂತಲ್ಲ—ಅಷ್ಟೆ ಅಥವಾ ಅದಕ್ಕಿಂತ ಕಡಿಮೆಯಲ್ಲದ ವೇಗದಿಂದ ನರಸಿಂಗರಾಯರ ಮನೆಗೆ ಓಡಿ, ಸ್ನಾನಕ್ಕಾಗಿ ಹೊರಟ ರಾಯರನ್ನು ಮನೆಯಂಗಳದಲ್ಲೆ ಭೇಟಿಯಾಗಿ, ಅವರ ಮೂಗನ್ನು ತನ್ನ ಕೈಯಿಂದ ಹಿಡಿದೆಳೆದು, ಮತ್ತೊಂದು ಕೈಯಿಂದ ತನ್ನ ಪದಕವನ್ನು ಕಿತ್ತು,—ನಾಸಿಕ ದ್ವಾರ ಬಂಧನ ಸಂಕಟದಿಂದ ನರಸಿಂಗರಾಯರು ಆಗಲೇ ಉಸಿರಿಗಾಗಿ ತೆರೆದ ಬಾಯಿಗೆ ಹಾಕಿದನು.

ರಾಯರು ಮೂಗನ್ನು ಹೇಗೂ ಬಿಡಿಸಿಕೊಂಡು, ಅದನ್ನು ಒಂದು ಕ್ಷಣ ಸವರಿ, ಕೋಪ-ಆಶ್ಚರ್ಯಗಳಿಂದ—"ಏ-ಏ-ಏನು?" ಎಂದರು.

"ಗಿ-ಗಿ-ಗಿಲಿಟು!" ಎಂದನು ಮುಂದಯ್ಯ.

ನಿಮಗಾಶ್ಚರ್ಯವಾಗಬಹುದು. ಆದರೆ, ಅದೆಲ್ಲ ಸತ್ಯ. ನರಸಿಂಗರಾಯರು 'ಚಾಪವೇಗ'ದಿಂದ ಒಳಗೋಡಿ, ಒಂದು ಪವನನ್ನು ತಂದು ಮುಂದಯ್ಯನ ಕೈಯ್ಯಲ್ಲಿಟ್ಟು, ಮುಂದಯ್ಯನ ಕಬ್ಬಿಣದ ಬೆರಳುಗಳ ಹಿಡಿತದಿಂದ ತನ್ನ ಕೋಮಲವಾದ ನಾಸಿಕಕ್ಕೆ ವಾತ ಹಿಡಿದಿರಬಹುದೋ ಎಂಬ ಗಾಬರಿಯಿಂದ

'ಮಹಾನಾರಾಯಣ ತೈಲ'ವನ್ನು ತರಿಸಿ, ತಿಕ್ಕಿ, ಮಿಂದು, ಶಾಖವಾದ ಬಟ್ಟೆಯನ್ನು ಅದರ ಮೇಲೆ ಹೊದ್ದುಕೊಂಡು, ಮೃದುತಲ್ಪದ ಮೇಲೆ ಪವಡಿಸಿ, "ಇನ್ನು ಯಾರಿಗೂ ಪದ ಕದ ಭಾಷೆ ಕೊಡುವುದಿಲ್ಲ"ವೆಂದುಕೊಂಡು, ಮಹಾನಾರಾಯಣನೆನಿಸಿದರು.

ನರಸಿಂಗರಾಯರೆಂದರೆ ಯಾರೆಂದು ನೀವು ಕೇಳುವ ಅವಶ್ಯವಿಲ್ಲ. ಎಲ್ಲರಿಗಿಂತಲೂ ಉದ್ದ ಮೂಗುಳ್ಳ ಕುಳ್ಳರೊಬ್ಬರು, ಕಚ್ಚೆ ಹಾಕದೆ ಧೋತರ ಉಟ್ಟುಕೊಂಡು, ಹಗಲಿನಲ್ಲಿ ಕಾಣಿಸಿಕೊಳ್ಳದೆ ರಾತ್ರಿಯಲ್ಲಿ ಮಾತ್ರ ಸಂಚರಿಸುವರಲ್ಲ!—ಅವರೇ ಇವರು!



## ೧೫. ಸವಿಯೂ ಡೊಂಕು!

ಗಾದೆಗಳನ್ನು ರಚಿಸಿದವರು ಸಾಯುವ ಎಲ್ಲ ಮನುಷ್ಯರಂತೆ ಸತ್ತರು. ಇನ್ನು ಕೆಲ ಕಾಲದಲ್ಲಿ ಅವರು ರಚಿಸಿದ ಗಾದೆಗಳೂ ಅವರ ಹಿಂದೆ ಸಾಯದಿರವು. ಸಾಯದವರನ್ನು ಬದುಕ ಬಿಡಲೊಪ್ಪದ ಜಗತ್ತು, ಸತ್ತವರು ತೊರೆದು ಹೋದ "ನಾಣ್ಣುಡಿ"ಗಳನ್ನೂ ಅಳಿಸಿ ಬಿಡುವ ಯತ್ನದಲ್ಲಿದೆ. ನಮ್ಮೂರಿನಲ್ಲಿ ಒಂದು ಗಾದೆ ಸತ್ತಿತು:—"ಬಾಳೆ ಡೊಂಕಾದರೆ ಸವಿ ಡೊಂಕೇ?"

ಚಂದ್ರಕಾಂತನು ಗಾಯನಕುಶಲನು. ಆವನ ಮೈಬಣ್ಣ ಕಪ್ಪು. ಮುಖವು 'ಅಸಹನೀಯ'ವಾದುದು; ಅಂದರೆ ಆವನೇನೂ ಅಪರಾಧ ಮಾಡಿರದಿದ್ದರೂ ಹಲವರು ಆತನ ಮುಖ ನೋಡುತ್ತಲೇ ಖಿಕೋ ಸಹಿಸರು. ಕೆಲವರು ಕೆರಳಿದುದೂ ಇದೆ. ಯಾರೊಬ್ಬನನ್ನಾದರೂ ನೋಡಿದರೆ ನಿಮ್ಮಲ್ಲಿ ಆಕರ್ಷಣ ಅಥವಾ ವಿಕರ್ಷಣ, ಇವೆರಡರಲ್ಲಿ ಒಂದು ಆಗಿಯೇ ಆಗುವುದು. ಚಂದ್ರಕಾಂತನನ್ನು ನೋಡುತ್ತಲೇ ಎರಡನೆಯ ಭಾವವೇ ಹೆಚ್ಚು ಮುಂದಿಗಳಲ್ಲುಂಟಾದ ಸಂಭವವೇ ಹೆಚ್ಚು.

ಕೇಳಂಬಿಯಾ ಗ್ರಾಮಫೋನ್ ಕಂಪೆನಿಯ ಹೆಸರನ್ನು ನೀವು ಕೇಳಿರಬಹುದು. ಗಾಯಕ ತಾರಾಮಂಡಲ ವಿಮರ್ಶಕನಾಗಿ ಆ ಕಂಪೆನಿಯ ಪ್ರತಿನಿಧಿಯೊಬ್ಬನು, ಎರಡು ವರ್ಷಕ್ಕೊಮ್ಮೆ ಇತ್ತ ಬರುವ ಪದ್ಧತಿಯಂತೆ ಕಳೆದ ವರ್ಷವೂ ಬಂದನು. ಬಂದ ದಿನವೇ ಹೇಗೋ ಆತನ ಪರಿಚಯ ಮಾಡಿಕೊಂಡ ಚಿತ್ರಕಲಾಕೋವಿದ ಗೋಪಾಲರಾಯರು ಆತನನ್ನು ತಮ್ಮಲ್ಲಿಗೆ ಆಮಂತ್ರಿಸಿ, ಮಾತುಕತೆ ಬೆಳೆಸಿದರು. ಗೋ

ಪಾಲರಾಯರೂ ಗಾನಪ್ರಿಯರು. ಅದು ಕಾರಣವೇ ಕೇಳಂಬಿಯಾ ಪ್ರತಿನಿಧಿಯನ್ನೂ ಪ್ರೀತಿಸಿದರು. ಪ್ರತಿನಿಧಿಯು ನಮ್ಮೂರಿನಲ್ಲಿ ಸಂಗೀತಜ್ಞರಾರಾರೆಂದು ಪ್ರಶ್ನಿಸಿದಾಗ, ಗೋಪಾಲರಾಯರಿಗೆ ಚಂದ್ರಕಾಂತನ ನೆನಪಾಯಿತು. ಚಂದ್ರಕಾಂತನು, ಬಾಯಿ ಬರುವಾಗಣಿಂದ ಗ್ರಾಮಫೋನ್ ರಿಕಾರ್ಡಿಗೆ ಹಾಡಿ ತನ್ನ ಗಾಯನವನ್ನು ತಾನೇ ಒಮ್ಮೆ ಕೇಳಬೇಕೆಂದು ವಿಶೇಷ ಕಾಂಕ್ಷೆಯನ್ನಿಟ್ಟುಕೊಂಡಿದ್ದನು. ಈ ಕಾಂತನ ಹೆಸರನ್ನು ಗೋಪಾಲರಾಯರು ಆ ಕೇಳಂಬಿಯಾ ಪ್ರತಿನಿಧಿಗೆ ಸೂಚಿಸಿದರು.

"ಮಧುರವಾದ ಕಂಠ; ಹಿಂದೂಸ್ಥಾನೀ ಚೀಝುಗಳನ್ನು ಬಲ್ಲನು; ದಕ್ಷಿಣಾದಿಯಲ್ಲೂ ಪರಿಶ್ರಮವಿದೆ. ಒಂದು ಹಾಡು ಹಾಡಿಸಿ ಕೇಳೋಣವೇ?" ಎಂದರು.

ಕೇಳಂಬಿಯಾ ಪ್ರತಿನಿಧಿಯು ಒಪ್ಪಿದನು. ಗೋಪಾಲರಾಯರು ಕಾಂತನನ್ನು ಕರೆಸಿದರು.

ಕರಿಯ ಬಣ್ಣಕ್ಕೆ ನೀಲವು ಮಿಶ್ರವಾದರೆ ಏನೇನೋ ಆಗುತ್ತದೆ ಭೀತಿ–ಸಂಕೋಚ–ಆತುರ–ಈ ಭಾವಗಳಿಂದ ಚಂದ್ರಕಾಂತನು ಅಲ್ಲಿಗೆ ಬರುತ್ತಲೇ—ಇವನೇ ಅವನು? ಎಂದು, ಕೇಳಂಬಿಯಾ ಪ್ರತಿನಿಧಿಯು ವ್ಯೈದೆಗೆಯುತ್ತ, ಅಸಹ್ಯ ಪಟ್ಟು, ಮೂಗನ್ನು ಮುದುಡಿಸಿದನು.

"ಅಹುದೆ"ಂದರು ಗೋಪಾಲರಾಯರು—

"ಇವನು! . . . ಬೇಡ, ಹಾಡುವುದೇ ಬೇಡ!"ವೆಂದನು ಕೇಳಂಬಿಯಾ ಪ್ರತಿನಿಧಿ.

ಗೋಪಾಲರಾಯರಿಗೆ ಆಶ್ಚರ್ಯವಾಯಿತು. ಸಂಗೀತಗಾರರು ಸುಂದರರೂ ಆಗಿರಬೇಕೆಂಬ ಅಭಿಪ್ರಾಯವನ್ನಿಟ್ಟು

ಕೊಂಡ ಈ ವಿಚಿತ್ರ ವ್ಯಕ್ತಿಯನ್ನು ನೋಡಿ ಅವರಿಗೆ ಮನಸ್ಸಿನಲ್ಲಿ ಏನೇನೋ ಅನಿಸಿತು. ಆದರೆ, "ಏಕೆ?" ಎಂದು ಪ್ರಶ್ನಿಸಲಿಲ್ಲ. ಪ್ರತಿನಿಧಿಗೆ ಒಂದು ಕಪ್ಪು ಚಹಾ ತರಿಸಿಕೊಟ್ಟು, ಸಾಯಂಕಾಲ ಸಿಗುವೆನೆಂದು, ಬೀಳ್ಕೊಟ್ಟರು. ಪ್ರತಿನಿಧಿಯು ಹೊರಟುಹೋದನು. ಗೋಪಾಲರಾಯರು ಚಂದ್ರಕಾಂತನಿಗೆ ಹುಶಾರಾಗಿರೆಂದು ಸಮಾಧಾನ ಹೇಳಿ, ಆತನನ್ನು ಕಳುಹಿಸಿಕೊಟ್ಟರು.

ಸಾಯಂಕಾಲ ಕೇಳಂಬಿಯಾ ಪ್ರತಿನಿಧಿಯು ಪುನಃ ಗೋಪಾಲರಾಯರನ್ನು ಭೇಟಿಯಾದನು. "ಒಳ್ಳೇ ಹುಡುಗಿ ಸ್ವಾಮಿಾ, ಸುಲಕ್ಷಣೆ! ಭಾರೀ ಗಾಯನ! ಆಕೆಯ ಕಂಠದ ಬೆಲೆ ಸಾವಿರ ಸಾವಿರ ರೂಪಾಯಿ! ಒಮ್ಮೆ ನೀವು ಆಕೆಯ ಗಾನದೂಟವನ್ನು ಸವಿಯಬೇಕೆಂದು ಅಪೇಕ್ಷೆ. ಏರ್ಪಾಡು ಮಾಡಿರುತ್ತೇನೆ!" ಎಂದರು ಗೋಪಾಲರಾಯರು.

"ಆಗಬಹುದು!" ಎಂದು ಸಂತೋಷದಿಂದೊಪ್ಪಿಕೊಂಡನು ಕೇಳಂಬಿಯಾ ಪ್ರತಿನಿಧಿ. ಗೋಪಾಲರಾಯರು ಆತನನ್ನು ಒಳಗಿನ ಕೊಠಡಿಗೆ ಕರೆದೊಯ್ದರು.

ಕೊಠಡಿಯಲ್ಲೊಂದು ಘರದೆ ಹಾಕಲ್ಪಟ್ಟಿತು. ಗೋಪಾಲರಾಯರು ಕೇ। ಪ್ರತಿನಿಧಿಯನ್ನು ಆ ಘರದೆಯ ಮುಂದೆ ಕುಳ್ಳಿರಿಸಿದರು.

"ಈ ಘರದೆ ಏಕೆ!" ಎಂದು ಕೇಳಿದನು ಕೇಳಂಬಿಯಾ ಪ್ರತಿನಿಧಿ.

"ಘರದೆಯ ಹಿಂದೆ ನಾನು ಹೇಳಿದ ಆ ಹುಡುಗಿ ಇದ್ದಾಳೆ ಸಾಮಿಾ! ಶ್ರೀಮಂತ ಕುಲದವಳು. ನಿಮ್ಮ ಮುಂದೆ ಕುಳಿತು ಹಾಡಲು ನಾಚುಗೆಯಂತೆ ಅವಳಿಗೆ!" ಎಂದರು ಗೋಪಾಲರಾಯರು.

"ಇರಲಿರಲಿ! ಗಾಯನವಾಗಲಿ" ಎಂದನು ಕೇ। ಪ್ರ।.

ಗಾಯನವಾರಂಭವಾಯಿತು. "ರೂಂಯ್‌" ಎನ್ನ ತೊಡಗಿತು ಹಾರ್ಮೋನಿಯಂ; ಅದರ ಶ್ರುತಿಯೊಂದಿಗೆ ಮಿಲನವಾದ ಸುಕೋಮಲವಾದ ಕಂಠವು ಕೇಳಿಸಿತು. ವಾತಾವರಣವು ಅಪೂರ್ವ ಮಾಧುರ್ಯದಿಂದ ತುಂಬಹೋಯಿತು. ಮಾಲಕಂಸ ಧಾಟಿಯಲ್ಲಿ ಸ್ತ್ರೀ ಕಂಠವೊಂದು, ಹಾಡನ್ನು ಹಾಡಿತು. ಸ್ವರವನ್ನು ಕೇಳಿ ಕೇ। ಪ್ರತಿನಿಧಿಯ ಮೈಯು ಒಂದು ಅವರ್ಣನೀಯ ಸಂತೋಷದಿಂದ ಝುಮ್ಮೆಂದಿತು. ಆಲಾಪನವು ತಾರಕಕ್ಕೇರಿ, ಮಂದಕ್ಕಿಳಿದು, ಮಂದಮಾರುತಸ್ಪರ್ಶದಿಂದ ಶಾಂತಸರೋವರದಲ್ಲೇಳುವ ತೆರೆಗಳಂತೆ ಕುಣಿಯುವಂತೆ ಆಡಿ, 'ಪಲ್ಟಿ'ಗಳಾಗಿ ಪುನಃ ತಾರಕಕ್ಕೇರಿ, ಉಯ್ಯಾಲೆಯಂತೆ ತೂಗಿ, ಶ್ರುತಿಯೊಂದಿಗೆ ಲಯಹೊಂದಿ, ದೂರದೊಂದು ಸ್ವರ್ಗತುಲ್ಯಸಾಮ್ರಾಜ್ಯದಿಂದ ಹೊರಡುವಂತೆ ಅತಿ ಮಂದವಾಗಿ, ಮತ್ತೊಮ್ಮೆ ಗಂಭೀರವಾಗಿ ಎದ್ದುಬಂದಂತೆ ಹೊರಹೊರಟು, ಪಲ್ಲವಿಗೆ ಬಂದು ನಿಂತಾಗ,—ಕೇಳಂಬಿಯಾ ಪ್ರತಿನಿಧಿಯು ಸ್ವರ್ಗದಿಂದ ನರಕಕ್ಕೆ ಬಿಸುಡಲ್ಪಟ್ಟಂತೆ ಫಕ್ಕನೆ ಮೈದೆಗೆದು, ಕಣ್ಣುಬಿಟ್ಟು ಸುತ್ತುಮುತ್ತಲೂ ನೋಡಿ, ಪ್ರಜ್ಞೆಹೊಂದಿ "ಇದು ಭೂಲೋಕ!" ಎಂದು ಗುರುತಿಸಿದನು.

ವ್ಯಾಘ್ರವು ಹುಲ್ಲೆ ಮರಿಯಂತಾದುದನ್ನು ನೋಡಿ ಗೋಪಾಲರಾಯರು ಮನಸ್ಸಿನಲ್ಲೆ ನಕ್ಕು, "ಹೇಗಿದೆ ಸ್ವಾಮಿ, ಗಾಯನ?" ಎಂದು ಪ್ರಶ್ನಿಸಿದರು.

ವರ್ಣಿಸಲು ಗುಣವಾಚಕಗಳೇನೂ ಬಾರದ ಆ ಬಡ ಪ್ರತಿನಿಧಿಯು—"ಬಹಳ ಸಾಧಾರಣ!" ಎನ್ನುತ್ತ "ಈಕೆಗೆ ಇನ್ನು ಯಾವ ಹಾಡು ಬರುತ್ತದೆ?" ಎಂದು ಪ್ರಶ್ನಿಸಿದನು.

"ನೂರಾರು ಬರುತ್ತವೆ ಸ್ವಾಮಿ. ಒಂದಕ್ಕಿಂತ ಮತ್ತೊಂದು ಚಂದ! ಆದರೆ, ಇನ್ನು ಹಾಡಲು ಸಮಯವಿಲ್ಲ. ಇದೊಂದು ಸಾಲದೆ?" ಎನ್ನುತ್ತ, ಗೋಪಾಲರಾಯರು ಎದ್ದರು.

ಶ್ರೀಮಂತ ಕನ್ನಿಕೆಯನ್ನು ಒತ್ತಾಯ ಪಡಿಸೆಂದು ಗೋಪಾಲರಾಯರಿಗೆ ಹೇಳಲಾರದೆ ಕೆ। ಪ್ರ। ಮಹಾಶಯನೂ ಗೋಪಾಲರಾಯರೊಂದಿಗೆ ಎದ್ದು ಹೊರಗೆ ಬಂದನು. ಅವನ ಮುಖಛಾಯೆಯೇ ಬದಲಾಗಿ ಹೋಗಿತ್ತು. ಹೊರಗೆ ಬಂದು ಒಂದು ನಿಟ್ಟುಸಿರು ಬಿಟ್ಟು,—"ಈಕೆ-ಈಕೆ-ಈಕೆಯ ಹೆಸರೇನು ಸ್ವಾಮಿ?" ಎಂದು ಕೇಳಿದನು.

"ಚಂದ್ರಿ!" ಎಂದುತ್ತರವಿತ್ತರು ಗೋಪಾಲರಾಯರು.

"ಈಕೆ ಇಪ್ಪತ್ತು ಒಳ್ಳೇ ಹಾಡುಗಳನ್ನು ಹಾಡುವಂತೆ ನನ್ನ ಶಿಫಾರಸು ಸ್ವಾಮಿ. ಹಾಡಿಗೆ 50 ರೂಪಾಯಿಯಂತೆ ಕೊಡಿಸುವ ಏರ್ಪಾಡು ಮಾಡುತ್ತೇನೆ. ನಾಳೆ ಊರಿಗೆ ತಲಪುತ್ತಲೇ ಕರಾರುಪತ್ರ ಕಳುಹುವೆನು. ಆಕೆಯ ಸಹಿ ಮಾಡಿಸಿ ಕಳುಹಿಸಿಕೊಡಿ. ಆ ನಂತರ ಹಣ ಕಳುಹುತ್ತೇವೆ. ಆಕೆ ಹೊರಟು ಬರಲಿ!" ಎಂದನು ಕೇ। ಪ್ರ।.

ಗೋಪಾಲರಾಯರು ನಗುಮೊಗದಿಂದ ಒಪ್ಪಿದರು.

ಮರುದಿನ ಕೇ। ಪ್ರತಿನಿಧಿಯು ಊರಿಗೆ ಹೊರಟನು. ಗೋಪಾಲರಾಯರು ಆತನಿಗೆ ವಿದಾಯವನ್ನೀಯಲು ರೈಲ್ವೆ ಸ್ಟೇಷನ್ ತನಕವೂ ಹೋಗಿದ್ದರು. ಪ್ರತಿನಿಧಿಯು ರೈಲು ಹತ್ತುವಾಗ ಗೋಪಾಲರಾಯರಂದರು:—"ಸ್ವಾಮಿ, ಒಂದು ಮಾತು ಹೇಳಬೇಕಾಗಿದೆ. ಹೇಳಬಾರದೆಂದಿದ್ದೆ. ಆದರೆ ತಾವು ಊರಿಗೆ ಹೋಗಿ, ಕರಾರುಪತ್ರ ಕಳುಹಿದ

ನಂತರ ಅನರ್ಥವಾದೀತೆಂದು ಈಗಲೇ ಹೇಳಬೇಕೆಂದು ಮನಸ್ಸು ಮಾಡಿದೆ."

"ಸಂಕೋಚವೇಕೆ? ಏನದು? ಹೇಳಿರಿ'' ಎಂದನು ಕೇ। ಪ್ರ।.

"ಚಂದ್ರಿ ಎಂದಿದ್ದೆನಲ್ಲಾ. ಚಂದ್ರಿಯು ಯಾರೆಂದು ಗೊತ್ತೇ?"

"ಯಾರು?"

"ಕರ್ರಗಿನ ಚಂದ್ರಕಾಂತ!"

"ಚಂದ್ರಕಾಂತ!!!"

"ಅಹುದು, ಅವನೇ!"

"ಹ್ಞ!...ಅವನಾದರೆ ನಮ್ಮ ಗ್ರಾಮಫೋನಿಗೆ ಹಾಡುವುದು ಅವಶ್ಯವಿಲ್ಲ!...ಗುಡ್‌ಬಾಯ್‌!" ಎನ್ನುತ್ತ ಕೇ। ಪ್ರ। ಮಹಾಶಯನು ರೈಲುಹತ್ತಿದನು.

"ಸ್ವಾಮಿ..!" ಎಂದರು ಆಶ್ಚರ್ಯದಿಂದ ಗೋಪಾಲರಾಯರು.

"ಗುಡ್‌ಬಾಯ್‌—ಗುಡ್‌ಬಾಯ್‌!" ಎಂದು ಕರವಸ್ತ್ರವನ್ನು ಬೀಸಿದನು ಕೇ। ಪ್ರ।.

"ಕೂಽ" ಎನ್ನುತ್ತ ರೈಲು ಬುಸುಗುಟ್ಟಿ ಚಲಿಸಲಾರಂಭಿಸಿತು.

ಗೋಪಾಲರಾಯರು ದಂಗುಬಡೆದವರಂತೆ ಅರೆನಿಮಿಷ ಅಲ್ಲೇ ನಿಂತು ಹುಚ್ಚನಂತೆ ನೋಡುತ್ತ, ಕೊನೆಗೆ "ಬಾಳೆ ಡೊಂಕಾದರೆ ಸವಿಯೂ ಡೊಂಕು!" ಎಂಬ ಉದ್ಗಾರ ತೆಗೆದು ಮೆಲ್ಲನೆ ಗೃಹಾಭಿಮುಖವಾಗಿ ತೆರಳಿದರು.

# ೧೬. ಬಯಸದ ಬಿರುದು.

ಕೆಲವು "ಫೋರ್ಜರಿ" ಕಳ್ಳಕಾಗದಗಳು ಇತಿಹಾಸ ಪ್ರಸಿದ್ಧವಾಗಿವೆ. ಅವುಗಳಲ್ಲಿ ಕೆಲವನ್ನಾದರೂ ಓದಿರಬಹುದಾದ ನೀವು, ಆ ಕಳ್ಳ ಕೈ ಬರಹಗಾರರ ಕೌಶಲಕ್ಕಾಗಿ ಬೆರಗುಪಟ್ಟಿರಬಹುದು. ಇತಿಹಾಸವು ದಾಖಲು ಮಾಡಿಕೊಂಡಿರದ ಕೆಲವು "ಫೋರ್ಜರಿ"ಗಳೂ ಇರುವುವು. ಅವು, ಪ್ರಸಿದ್ಧವಾದ "ಫೋರ್ಜರಿ"ಗಳಿಗಿಂತಲೂ ಶತಪಾಲು ಮಿಗಿಲಾದ್ದುವು.

ಇತಿಹಾಸ ಪ್ರಸಿದ್ಧ "ಫೋರ್ಜರಿ"ಗಳಲ್ಲಿ, "ಫೋರ್ಜರಿ" ಜನಕರು ಕೇವಲ ಧನದಾಸೆಯಿಂದ ಅಥವಾ ಸ್ವೀಯಕ್ಕಾಗಿ ಯಾವುದಾದರೂ ಇತರ ದುರಾಭಿಲಾಷೆಯಿಂದ ಕಳ್ಳಕಾಗದಗಳನ್ನು ಬರೆದರು. ಆದರಲ್ಲಿ ಅವರು, ಯಾರ ಹೆಸರಲ್ಲಿ ಆ ಪತ್ರಗಳನ್ನು ಬರೆದರೋ ಅವರಿಗಿಂತ ತಾವೇ ಹೆಚ್ಚು ನಷ್ಟ ಹೊಂದಿದುದಿದೆ. ಇತಿಹಾಸದಲ್ಲಿ ಲಿಖಿಸಲ್ಪಡದಿರುವ "ಫೋರ್ಜರಿ" ಜನಕರು, ಇತರರನ್ನು ನೋಯಿಸಿ, ತಾವೂ ನೊಂದು, ತಮ್ಮ ಮನೋವಾಂಛಿತವೂ ಕೈಗೂಡದಂತಾಗಿ ಜೀವನ್ಮೃತರೆನಿಸಿದುದಿದೆ.

ಶಂಕರ ನಾರಾಯಣರಾಯರು ಜಮೀನ್ದಾರರು. ಅವರಿಗೆ ಕುಲಗೌರವವೆಂದರೆ ಮಹಾಪ್ರಾಣ. ಹೆಸರಿಗೆ ಕಲಂಕ ಬಂದರೆ, ಅದನ್ನಳಿಸಿ ಬಿಡುವುದು ಈ ಜನ್ಮದಲ್ಲಿ ಅಸಾಧ್ಯವೆಂದು ಅವರಿಗೆ ಚೆನ್ನಾಗಿ ಗೊತ್ತು.

ಅವರ ಜವುಳಿ ವ್ಯಾಪಾರ ಶ್ರೀಪಾದರಾಯರ ಅಂಗಡಿಯಲ್ಲಿ; ದವಸ ಧಾನ್ಯಗಳ ಖರೀದಿ—ಶ್ರೀಪಾದರಾಯರ ಸಹೋದರ ನೀಲಕಾಂತರವರಲ್ಲಿ; "ಕಟ್ಲೇರಿ" ವ್ಯಾಪಾರ—ನೀಲಕಾಂತರವರ ಅಳಿಯ ಕೃಷ್ಣರಾಯರಲ್ಲಿ. ಇನ್ನು—ಅವ

ರೋದುವ ವೃತ್ತಪತ್ರಿಕೆಯ ಚಂದಾದಾರಿಕೆ ಕೃಷ್ಣರಾಯರ ಮಾವನ ಮಗ ಬಾಬುರಾಯರಲ್ಲಿ! ಹೀಗೆ, ಶಂಕರ ನಾರಾಯಣ ರಾಯರು, ತಮ್ಮ ವ್ಯವಹಾರವನ್ನೂ ಒಂದೇ ಬಳಗದೊಳಗೇ ನಡೆಸಿದ್ದರು. ಆ ಅಂಗಡಿಗಾರರೆಲ್ಲರಿಗೂ, ಪತ್ರಿಕಾ ಸಂಪಾದಕರಿಗೂ ಶಂಕರ ನಾರಾಯಣರಾಯರೆಂದರೆ ಅತೀವ ಗೌರವ; ಅವರ ಪ್ರಾಮಾಣಿಕತೆಯಲ್ಲಿ ಅಚಲ ವಿಶ್ವಾಸ.

ಒಂದು ಸೋಮವಾರ ಬೆಳಿಗ್ಗೆ, ಶ್ರೀಪಾದರಾಯರಿಗೆ ಈ ಕಾಗದ ಬಂತು:—"ನೀವು ನಿನ್ನೆ ಕಳುಹಿದ ಎರಡು ಸೀರೆಗಳನ್ನೂ ಒಂದು ಧೋತರವನ್ನೂ ಹಿಂದೆ ಕಳುಹಿಸಿ ಕೊಟ್ಟಿದ್ದೇನೆ. ನಿಮ್ಮ ಅಂಗಡಿಯಲ್ಲಿ ವ್ಯಾಪಾರ ಮಾಡಲು ನನಗೆ ಇಚ್ಛೆಯಿಲ್ಲ. ಆ ಸೀರೆಗಳಿಗೆ ನಾನು ಹೇಳಿಕಳುಹಿಸಿಲ್ಲ. ಇನ್ನು ಮುಂದೆ ನೀವು ಏನನ್ನಾದರೂ ಕಳುಹಿಸಿದರೆ ಅದರ ಹಣಕ್ಕೆ ನಾನು ಜವಾಬ್ದಾರನಲ್ಲ. ತಿಳಿದಿರಲಿ! (ಕೆಳಗೆ "S. N. R" ಎಂದು ಸಹಿ!)

ಶ್ರೀಪಾದರಾಯರಿಗೆ ಆಶ್ಚರ್ಯವಾಯಿತು ಸೀರೆ ಮತ್ತು ಧೋತಿಗಳನ್ನು ಶಂಕರ ನಾರಾಯಣರಾಯರೇ ಹಿಂದಣ ದಿನ ಬಂದು ನೋಡಿ, ಆರಿಸಿಟ್ಟು, "ನಾಳೆ ಕಳುಹಿ ಕೊಡಿರಿ!" ಎಂದು ಹೇಳಿ ಹೋಗಿದ್ದರು! 24 ತಾಸುಗಳೊಳಗೆ ಇಂತಹ ವಿಚಿತ್ರ ಪತ್ರವನ್ನೇಕೆ ಬರೆದರೆಂದು ಅವರಿಗೆ ತಿಳಿಯದಾಯಿತು. ಇದು ಹುಚ್ಚು ಅಲ್ಲವಾದರೆ ಜಾಣತನವೂ ಅಲ್ಲ!

ಮರುದಿನ, ಮಂಗಳವಾರ, ನೀಲಕಾಂತರವರಿಗೊಂದು ಪತ್ರ—". . . . ಇನ್ನು ನೀವು ನಮ್ಮ ಮನೆಗೆ ಸಾಮಾನು ಕಳುಹಿಕೊಟ್ಟರೆ ಅದರ ಹಣಕ್ಕೆ ನಾನು ಜವಾಬ್ದಾರನಲ್ಲ. ತಿಳಿದಿರಲಿ." (ಕೆಳಗೆ "S. N. R." ಎಂದೇ ಸಹಿ!)

"ಇದು ವಿಚಿತ್ರ! ಅಥವಾ ಹುಚ್ಚು!" ಎಂದು ಕೊಂಡರು ನೀಲಕಾಂತರು.

ಬುಧವಾರ ದಿನ ಕೃಷ್ಣರಾಯರಿಗೆ ಈ ಪತ್ರ:—"ನೀವು ಈ ದಿನ ಬೆಳಿಗ್ಗೆ ಕಳುಹಿಕೊಟ್ಟ ಕಾಗದದ ರೀಮು ಮತ್ತು ಶಾಯಿ ಬಾಟಲಿಯನ್ನು ಕಳುಹಿಕೊಟ್ಟಿದ್ದೇನೆ. ನಾನು ಹೇಳದೆ ಕಳುಹಿಕೊಟ್ಟಿದ್ದೀರಿ. ನಿಮ್ಮ ಅಂಗಡಿಯಲ್ಲಿ ಇನ್ನು ಮುಂದೆ ನಮಗೆ ವ್ಯಾಪಾರವಿಲ್ಲ. ಇನ್ನು ನೀವು ಕಳುಹಿ ಕೊಡುವ ಸಾಮಾನುಗಳ ಹಣಕ್ಕೆ ನಾವು ಜವಾಬ್ದಾರರಲ್ಲ. ತಿಳಿದಿರಲಿ!" (ಕೆಳಗೆ "S. N. R." ಎಂದು ಸಹಿ!)

"ಇದೇನು ಆಪತ್ತು? ಶಂಕರ ನಾರಾಯಣರು ಹೇಳಿ ಹೋಗಿದ್ದರು—ಕಾಗದ ಮತ್ತು ಶಾಯಿ ಕಳುಹಬೇಕೆಂದು; ಕಳುಹಿಕೊಟ್ಟೆ! 'ನಾನು ಹೇಳದೆ ಕಳುಹಿಕೊಟ್ಟಿದ್ದೀರಿ' ಎಂದು ಈಗ ಬರೆಯುತ್ತಿದ್ದಾರೆ! ಇದು ಹುಚ್ಚು!" ಎಂದರು ಕೃಷ್ಣರಾಯರು.

ಗುರುವಾರ ದಿನ "ಉದಯ" ಪತ್ರಿಕಾ ಸಂಪಾದಕರು ತಮ್ಮ ಕಾರ್ಯಾಲಯದಲ್ಲಿ ಕುಳಿತು ತೂಕಡಿಸುತ್ತಿದ್ದಾಗ— "ಸ್ವಾಮೀ!" ಎನ್ನುತ್ತ ಒಂದು ಕಪ್ಪಗಿನ ವ್ಯಕ್ತಿ ಬಂದು ಅವರನ್ನು ಎಚ್ಚರಿಸಿ, ಒಂದು ಪತ್ರಿಕೆಯನ್ನೂ ಒಂದು ಪತ್ರ ವನ್ನೂ ಅವರ ಕೈಗೆ ಕೊಟ್ಟು,—"ಯಾರ ಪತ್ರ?" ಎಂದು ಬಾಬರಾಯರು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೊಡದೆ, ಬೆಕ್ಕಿನಂತೆ ಓಡಿಹೋಯಿತು. ಸಂಪಾದಕರು ಪತ್ರವನ್ನು ತೆರೆದು ಓದಿದರು:—ನಿಮ್ಮ ಪತ್ರಿಕೆಯನ್ನು ನಮಗೇಕೆ ಕಳುಹಿ ಕೊಡುತ್ತಿರೋ ತಿಳಿಯದು. ನಾನು, ಅದನ್ನು ಬೇಕೆಂದು ಹೇಳಿಲ್ಲ. ಈಗ ಆ ಪತ್ರಿಕೆಯನ್ನು ನಿಮಗೇ ಮರಳಿ ಕಳುಹಿ

ಕೊಟ್ಟಿದ್ದೇನೆ. ಇನ್ನು ಮುಂದೆ ನೀವು ಕಳುಹಿದರೆ ಅದರ ಚಂದಾಹಣಕ್ಕೆ ನಾನು ಜವಾಬುದಾರನಲ್ಲ; ತಿಳಿದಿರಲಿ!" (ಕೆಳಗೆ "S. N. R." ಎಂದೇ ಸಹಿ!)

"ಮೂರು ವರ್ಷಗಳಿಂದಲೂ ಚಂದಾದಾರರಿವರು! ಅದಲ್ಲದೆ, ಮುಂದಿನ ವರ್ಷದ ಚಂದಾಹಣವನ್ನು ಮೊನ್ನೆ ತಾನೇ ಕಳುಹಿಕೊಟ್ಟಿದ್ದಾರೆ! ಈ ಪತ್ರದ ಅರ್ಥವೇನಪ್ಪ! ರಾಯರಿಗೆ ಮಿದುಳು ಭ್ರಮಣವಾಗಹತ್ತಿದೆಯೇ?" ಎಂದು ಆಶ್ಚರ್ಯಪಟ್ಟರು ಸಂಪಾದಕರು.

ಆ ರಾತ್ರೆ,—ಶ್ರೀಪಾದರಾಯ, ನೀಲಕಾಂತ, ಕೃಷ್ಣ ರಾಯ ಮತ್ತು ಬಾಬರಾಯ ಈ ನಾಲ್ವರೂ ಒಂದು ಕಡೆ ಯಲ್ಲಿ ಒಟ್ಟಾದರು. ನಾಲ್ವರೂ, ತಮ್ಮೆಲ್ಲರಿಗೂ ಏಕರೀತಿಯ ಪತ್ರ ಬಂದುದನ್ನು ತಿಳಿದು ಆಶ್ಚರ್ಯಪಟ್ಟರು. "ಕುಲ ಗೌರವ"ವೆಂದು ಅಭಿಮಾನಪಡುತ್ತಿರುವ ಶಂಕರನಾರಾಯಣ ರಾಯರು ಇಂತಹ "ಘಟಿಂಗ"ರಾದರಲ್ಲ ಎಂದು ಮರುಕ ಗೊಂಡರು. "ಪ್ರಾಮಾಣಿಕ"ರೆಂದು ತಾವು ನಂಬಿದ್ದ ರಾಯರು ಇಂತಹ "ಲುಚ್ಚ"ನೆಂದು ತಿಳಿಯಲು ಖೇದ ಗೊಂಡರು. ಕೊನೆಗೆ ಶಂಕರ ನಾರಾಯಣರಾಯರಿಗೆ ಅತಿ ಅಪಾಯಕಾರಿ ಜಾತಿಯ ಹುಚ್ಚು ತಗಲಿರಬೇಕೆಂಬ ಠರಾವು ಸರ್ವಾನುಮತದಿಂದ ಮಂಜೂರಾಯಿತು.

ಅಸ್ವಸ್ಥ(ಹುಚ್ಚು)ದವನನ್ನು ಕಾಣಬೇಕೆಂದೂ, ಆ ನಾಲ್ವರಲ್ಲಿಯೂ ಮನಸ್ಸಾಯಿತು. ನಾಲ್ವರೂ ಶಂಕರ ನಾರಾಯಣ ರಾಯರಲ್ಲಿಗೆ ಹೊರಟುಹೋದರು.

ಶಂಕರ ನಾರಾಯಣರಾಯರು ಮನೆ ಜಗಲಿಯ ಮೇಲೆ ಕುಳಿತುಕೊಂಡು, ತಾಂಬೂಲ ಚರ್ವಣದ ಸುಖದಲ್ಲಿ

ಇದ್ದರು. ಈ ನಾಲ್ವರನ್ನೂ ಕಂಡು ಸಂತೋಷದಿಂದ "ಹೊ ಹೊ ಹೊ—ಬನ್ನಿ ಬನ್ನಿ!" ಎಂದು ಅತಿ ಉತ್ಸುಕತೆಯಿಂದ ಆಮಂತ್ರಿಸಿದರು.

ನಾಲ್ವರಿಗೂ ಶಂಕರ ನಾರಾಯಣರಾಯರ ಉತ್ಸಾಹದ ನುಡಿಗಳನ್ನು ಕೇಳಿ ಆಶ್ಚರ್ಯವಾಯಿತು. ಆದರೂ, ಚಿಕ್ಕ ಮಕ್ಕಳೂ ಹೆಂಗುಸರೂ ನಿರ್ಭಯವಾಗಿ ಅತ್ತಿತ್ತ ಓಡಾಡುತ್ತಿದ್ದುದರಿಂದ ಇದು ಅಪಾಯಕಾರಿ ಹುಚ್ಚಲ್ಲವೆಂದು ಕೊಂಚ ಸಮಾಧಾನವಾಯಿತು. ಸಂಕೋಚದಿಂದ ನಾಲ್ವರೂ, ಜಗಲಿಗೇರಿ, ದೂರದಲ್ಲಿ ಕುಳಿತರು.

"ಏನು ಬಂದಿರಿ—ನಾಲ್ವರೂ ಒಟ್ಟಿಗೆ?" ಎಂದು ಪ್ರಶ್ನಿಸಿದರು ಶಂಕರ ನಾರಾಯಣರಾಯರು.

"ತಮ್ಮನ್ನು ನೋಡಿಹೋಗಲು" ಎಂದುತ್ತರವಿತ್ತರು ಇಬ್ಬರು.

"ನನ್ನನ್ನು ನೋಡಿಹೋಗಲಿಕ್ಕೆ! . . . . ಇರಲಿರಲಿ. ನಾನೇ ನಾಳೆ ಬೆಳಗ್ಗೆ ಬಂದು ನಿಮ್ಮೆಲ್ಲರನ್ನೂ ಕಾಣಬೇಕೆಂದು ಬಗೆದಿದ್ದೆ. ನೀವೇ ಬಂದಿರಿ. ಈಗ ಹೇಳಿರಿ—ನಿಮಗೆಲ್ಲರಿಗೂ ಹುಚ್ಚು ಗಿಚ್ಚು ಆರಂಭವಾಗಿದೆಯೇ?"

ಹುಚ್ಚು!—ಈ ನಾಲ್ವರಿಗೆ!! . . . . . ಮದ್ಯಪಾನ ಮಾಡಿದವರು, ತಮ್ಮನ್ನು ಭೇಟಿಯಾದವರನ್ನು "ನೀನು ಕುಡುಕ" ಎನ್ನುವುದುಂಟಂತೆ. ಹಾಗೆ, ಹುಚ್ಚರಾದ ಶಂಕರ ನಾರಾಯಣರಾಯರು ಇವರನ್ನೂ ಹುಚ್ಚರೆನ್ನುತ್ತಿದ್ದಾರೆ!

ಶಂಕರ ನಾರಾಯಣರಾಯರು ಮುಂದರಿಸಿದರು:— "ನೋಡಿ ರಾಯರುಗಳೇ! ನಾನು ಸೀರೆ ಮತ್ತು ಧೋತರ

ತೆಗೆದಿಟ್ಟು ಬಂದಿದ್ದೆ—ಅದನ್ನು ಶ್ರೀಪಾದರಾಯರು ಕಳುಹಿ ಕೊಟ್ಟಿಲ್ಲ; ದವಸ ಧಾನ್ಯಗಳನ್ನು ಮೂರುದಿನಗಳಿಂದ ನೀಲ ಕಾಂತರು ಕಳುಹಿಕೊಟ್ಟಿಲ್ಲ; ಕಾಗದ-ಶಾಯಿಗಳನ್ನು ಕೃಷ್ಣ ರಾಯರು ಕಳುಹಿಕೊಟ್ಟಿಲ್ಲ. ಬಾಬರಾಯರು ಪೇಪರನ್ನು ಕೂಡ ಕಳುಹಿಕೊಟ್ಟಿಲ್ಲ. ಹಲವು ವರ್ಷಗಳಿಂದ ಕ್ರಮ ವಾಗಿ ಎಲ್ಲವನ್ನೂ ಕಳುಹಿಕೊಟ್ಟ ನಿಮಗೆ ಆಕಸ್ಮಿಕವಾಗಿ ಈ ಬುದ್ಧಿ ಏಕೆ ಬಂತು?"

ನಾಲ್ವರೂ ಆಶ್ಚರ್ಯದಿಂದ ಒಬ್ಬರು ಇನ್ನೊಬ್ಬರ ಮುಖವನ್ನು ನೋಡಿದರು.

ಶಂಕರ ನಾರಾಯಣರಾಯರು ನಗು ಮೊಗವನ್ನು ಮಾರ್ಪಡಿಸಿ ಗಂಭೀರವಾಗಿ, "ನಾನೇನು ದಿವಾಳಿಗಿವಾಳಿ ಎಂದು ಹೆದರಿದಿರೇನು?....... ಹೀಗೆ ನಾಲ್ವರೂ ಒಗ್ಗ ಟ್ಟಾಗಿ ಏಕಕಾಲದಲ್ಲಿ ನನ್ನನ್ನು ಬಹಿಷ್ಕರಿಸುವ ಆಲೋ ಚನೆಯನ್ನೇಕೆ ಮಾಡಿದಿರಿ?" ಎಂದು ಪ್ರಶ್ನಿಸಿದರು.

ಧೈರ್ಯಪಟ್ಟು ಮಾತಾಡಿದವರು ಬಾಬರಾಯರೇ. "ಸ್ವಾಮಿ, ತಮಗೆ ಯಾವ ವೈದ್ಯರು ಚಿಕಿತ್ಸೆ ನಡೆಸುತ್ತಿ ದ್ದಾರೆ?" ಎಂದು ಅವರ ಪ್ರಶ್ನೆ.

ಶಂಕರ ನಾರಾಯಣರಾಯರು ಅವಾಕ್ಕಾದರು. "ಯಾವ ವೈದ್ಯರ ಚಿಕಿತ್ಸೆ? ನನಗೆ ಅಪಸ್ಮಾರವೇ? ಜ್ವರವೇ? ನಾನು ಹುಶಾರಿದ್ದೇನಲ್ಲ!" ಎಂದರು.

"ನೋಡಿರಿ, ಈ ಪತ್ರವನ್ನು ನೀವು ಬರೆದುದಲ್ಲವೇ?" ಎನ್ನುತ್ತ ಬಾಬರಾಯರು ತಮ್ಮ ಜೇಬಿನಿಂದೊಂದು ಪತ್ರ ವನ್ನು ತೆಗೆದು ರಾಯರ ಮುಂದಿಟ್ಟರು.

"ಇದು ಯಾರದು ಸ್ವಾಮಿ?" ಎನ್ನುತ್ತ ಕೃಷ್ಣ ರಾಯರು ಒಂದು ಪತ್ರವನ್ನು ರಾಯರ ಮುಂದೇ ಒಗೆದು ಮುಖ ಕೆಂಪಗೆ ಮಾಡಿ, ರಾಯರ ಮುಖವನ್ನೇ ದೃಷ್ಟಿಸುತ್ತ, ಈ ದೃಷ್ಟಿಗೆ ರಾಯರು ಸುಟ್ಟುಹೋಗಲೇಬೇಕೆಂದು ನಿರೀಕ್ಷಿ ಸುವವರಾದರು.

"ಇದನ್ನು ಗುರುತಿಸಬಲ್ಲಿರಾ?" ಎಂಬ ಪ್ರಶ್ನೆಯೊಡನೆ ನೀಲಕಾಂತರ ಕರಿ ಕಂಠವೂ ಪ್ರಶ್ನಾರ್ಥಕ ಚಿಹ್ನೆಯಂತೆ ನಡುವೆ ಡೊಂಕಾಗಿ ಬಾಗಿ, ಅದರೊಂದಿಗೆ ಒಂದು ಪತ್ರವೂ ಸರಕ್ಕನೆ ಹೊರಗೆ ಬಂದು ರಾಯರ ತೊಡೆಗೆ ಬಿತ್ತು.

"ಇದನ್ನು ಒಮ್ಮೆ ಕಣ್ಣುಬಿಟ್ಟು ನೋಡಿ!" ಎನ್ನುತ್ತ ಶ್ರೀಪಾದರಾಯರೂ ಒಂದು ಪತ್ರವನ್ನು ರಾಯರಿಗೆ ಉಡು ಗೊರೆಯಾಗಿ ಕೊಟ್ಟರು.

ಶಂಕರ ನಾರಾಯಣರಾಯರು, "ಇವರು ಅಮಲುಕರ ಪದಾರ್ಥವನ್ನೇನಾದರೂ ಸೇವಿಸಿ ಬಂದಿರುವರೇ" ಎಂದು ಶಂಕಿಸಿ, ಆ ಮೇಲೆ ಆ ಪತ್ರಗಳೆಲ್ಲವನ್ನೂ ಓದಿದರು. ಅವರಿಗೆ ಆಶ್ಚರ್ಯವಾಯಿತು. ಪುನಃ ಓದಿದರು. ಚೆನ್ನಾಗಿ ಆಲೋಚಿ ಸಿದರು. ಆಲೋಚಿಸಿದ್ದಂತೆ ಅವರ ಮುಖವು ಕಪ್ಪ ಗಾಯಿತು. ಏನೋ ಆಂತರಿಕ ದುಃಖವುಂಟಾದಂತೆ ತೋರಿತು. ಮೆಲ್ಲನೆ—"ಇವುಗಳನ್ನು ನಾನು ಬರೆದಿಲ್ಲ. ನನ್ನನ್ನು ಅಪಮಾನಗೊಳಿಸಬೇಕೆಂದು ಯಾರೋ ಬರೆದಿರ ಬೇಕು" ಎಂದರು.

ನಾಲ್ವರೂ ಹೊರಟುಹೋದ ಬಳಿಕ ರಾಯರು ತನ್ನ ಸಹೋದರ ಶ್ರೀನಿವಾಸರಾಯನನ್ನು ಕರೆದು "ತಮ್ಮಾ, ಈ

ಪತ್ರಗಳನ್ನು ಗುರುತಿಸ ಬಲ್ಲೆಯಾ?" ಎಂದು ಪ್ರಶ್ನಿಸಿದರು. ತಮ್ಮನು ನಾಚಿಕೆಯಿಂದ ತಲೆವಾಗಿದನು.

"ಇವುಗಳನ್ನು ನೀನೇಕೆ ಬರೆದೆ?"

ಉತ್ತರವಿಲ್ಲ.

"ಏಕೆ ಬರೆದೆಯೆಂದು ಹೇಳು. ನಾನು ನಿನ್ನನ್ನೇನೂ ನೋಯಿಸುವುದಿಲ್ಲ. ನನಗೆ ಕಾರಣವನ್ನು ತಿಳಿಸಿದರೆ ಸಾಕು."

"ನನ್ನ ಕುರಿತು ಉದಯ ಪತ್ರಿಕಾ ಸಂಪಾದಕ ಬಾಬ ರಾಯರು ಅದೊಂದು ಸಂದರ್ಭದಲ್ಲಿ, ಚೆನ್ನಾಗಿ ಟೀಕಿಸಿದ್ದರು. ಅದಕ್ಕಾಗಿ ಅವರೆಲ್ಲರನ್ನೂ ಬಹಿಷ್ಕರಿಸಬೇಕೆಂದು ನನ್ನಲ್ಲಿ ಸೇಡಿನ ತೃಷೆಯುಂಟಾಯಿತು!" ಎಂದು ಬಿಕ್ಕು ಮಾತಿನಲ್ಲಿ ಉತ್ತರ ಬಂತು.

"ಅಯ್ಯೋ, ನಿನ್ನ ಮಿದುಳೇ! ನೀನು ಇಷ್ಟು ಕ್ಷುದ್ರ ಜೀವಿಯೆಂದು ನಾನೆಣಿಸಿರಲಿಲ್ಲ. . . . . ಇದನ್ನು ನೀನೊಬ್ಬನೇ ಬರೆದಿಯಾ ಅಥವಾ ಇನ್ನಾರಾದರೂ ಸಹಾಯಕ್ಕಿದ್ದರೇ? ನಿನಗೆ ಸ್ವಚ್ಛವಾಗಿ ಕನ್ನಡ ಬರೆಯಲು ತಿಳಿಯದಲ್ಲ!"

"ನಮ್ಮ ಮಾಧವನು (ಸಮೀಪದ ಬಂಧುವೊಬ್ಬನು) ಅವುಗಳನ್ನು ನನಗೆ ಬರೆದು ಕೊಟ್ಟನು. ನಾನು S. N. R. ಎಂದು ಸಹಿ ಹಾಕಿದೆ."

"S. N. R. ಎಂದರೆ?"

"ಶ್ರೀ-ನಿವಾಸ-ರಾವ್ (Sri-Nivas-Rao) ಎಂದು."

"ಓಹೋ! 'ಶಂಕರ—ನಾರಾಯಣ—ರಾವ್'

(Shanker—Narayan—Rao) ಎಂದೂ ಆಗುವುದಲ್ಲವೆ ಅದು?"

"ಆಹುದು."

"ತಮ್ಮಾ! ನೀನು,—ಆನೆಯ ಹೊಟ್ಟೆಯಲ್ಲಿ ಕತ್ತೆಯಾಗಿ ಹುಟ್ಟಿದೆ. ಮಾಧವನು,—ಸಿಂಹದ ಹೊಟ್ಟೆಯಲ್ಲಿ ನರಿಯಾಗಿ ಹುಟ್ಟಿದ!" ಎಂದು ಆತನ ಜನನದ ನಿಜವೃತ್ತಾಂತವನ್ನಾತನಿಗೆ ತಿಳಿಸಿ, ಶಂಕರ ನಾರಾಯಣರಾಯರು ದುಃಖದಿಂದ ಹಣೆ ಬಡೆದುಕೊಂಡು, "ನನ್ನನ್ನೆಲ್ಲರೂ ಹುಚ್ಚನೆಂದು ತಿಳಿದು ಕೊಂಡರಲ್ಲ! ನಾನು ಯಾರಿಗೂ ಯಾವ ಬಗೆಯ ನೋವನ್ನೂ ಉಂಟುಮಾಡದೆ ಈ ಬಿರುದು ಬಂತಲ್ಲ!" ಎಂದು ಒಳಗಿಂದೊಳಗೆ ಮರುಗಿದರು.

"ಹುಚ್ಚ ತಮ್ಮಂದಿರಿದ್ದಲ್ಲಿ,- ಅವರ ಕೊಠಡಿಯ ಹೊರಗೆ "ಅಪಾಯ!" ಎಂದು ಬರೆದಿರುವ ಹಲಗೆಯನ್ನು ತೂಗ ಹಾಕಿ, ಆ ತಮ್ಮಂದಿರ ಲೇಖನ-ಶಾಯಿ-ಕಾಗದಗಳ ಮೇಲೊಂದು ಕಾವಲು ಇಡಬಾರದೇಕೆ?" ಎಂದು ರಾಯರು ಇನ್ನೂ ಆಲೋಚಿಸುತ್ತಿರುವರು.



## ೧೭. ಬಹುಮಾನದ ಯೋಗ್ಯತೆ.

ವೀರಬಾಲಕರಿರುವರು; ಬಾಲಕಿಯರೂ ಇರುವರು. ಆದರೆ, ನಮ್ಮ ಸರೋಜನಿಗೆ ಸರಿಗಟ್ಟುವವರಾರೂ ಇಲ್ಲ.

ತಾಯ್ತಂದೆಗಳಿಗೆ ತಮ್ಮ ಮಕ್ಕಳ ಮೇಲೆ ಸಹಜವಾಗಿ ಮಮತೆಯಿದೆ; ಆದರೆ, ಗಂಡುಮಕ್ಕಳ ಮೇಲೆ ವಿಶೇಷ. ಇದು, ಗಂಡುಗಳ ಭಾಗ್ಯವೋ ಹೆಣ್ಣುಗಳ ದುರ್ಭಾಗ್ಯವೊ ಏನೋ ಒಂದು. ಮಮತೆಯಲ್ಲಿಯೂ ಹೆಚ್ಚು ಮತ್ತು ಕಡಮೆಗಳೆಂಬುವು ಇದ್ದಿರಬೇಕು.

ಕೋದಂಡರಾಯರ ಚಿಕ್ಕ ನಾಣುವು ಜಗಲಿಯಿಂದ ಕೆಳಗೆ ಬಿದ್ದನು. ಹಣೆಗೊಂದು ಚಿಕ್ಕ ಗಾಯವಾಯಿತು. "ಬಾಯಿಬಂದಿತ್ತು" ಅಷ್ಟೆ. ತಂದೆಯು, ಜಗಲಿ ಮೇಲಿದ್ದವನು ತಾನೂ ಕೆಳಗೆ ದುಮುಕಿ, ನಾಣುವನ್ನೆತ್ತಿ, ಅಳುತಿದ್ದ ಆ ಮಗುವನ್ನು ತೊದಲ್ನುಡಿಗಳಿಂದ ನಾನಾ ಬಗೆಯಾಗಿ ಸಮಾಧಾನ ಪಡಿಸಲೆತ್ನಿಸಿದನು. ಗೃಹಿಣಿಯು ಹೊರಗೆ ಬಂದು, ನಾಣುವು ಬಿದ್ದುದು ಆತನ ತಂದೆಯ ಅಜಾಗರೂಕತೆಯಿಂದೆಂದು "ಚಾರ್ಜು" ಮಾಡಿ,—"ಪಾವಾಣೆಯ ಪೆಪ್ಪರ್‌ಮಿಠಾಯಿ ತಂದುಕೊಡಿರಿ!" ಎಂದು ತೀರ್ಪು ಕೊಟ್ಟಳು.

ಕೋದಂಡರಾಯರ ಕಿಸೆಯಿಂದೊಂದು ಕಾಲಾಣೆ ನಾಣ್ಯವು ಅಂಗಡಿಗಾರನಿಗೆ ಮುಟ್ಟಿ, ಅಂಗಡಿಗಾರನಿಂದ ಚಿಕ್ಕ ಆರು ಪೆಪ್ಪರ್‌ಮಿಠಾಯಿ ಗುಳಿಗೆಗಳಿತ್ತ ಬಂದುವು. ಒಂದನ್ನು ನಾಣುವಿನ ಬಾಯಿಗೆ ಕೊಟ್ಟು, ಉಳಿದೈದನ್ನು

ಕೋದಂಡರಾಯರು ಬಳಿಯಲ್ಲೇ ಇರಿಸಿ,—“ಮಗುವಿನ ಹಣೆಯ ಪೆಟ್ಟು ದೊಡ್ಡದು; ಫಕ್ಕನೆ ಮಾಸಿ ಹೋಗುವಂಥ ದಲ್ಲ. ಈ ಐದು ಪೆಪ್ಪರ್‌ಮಿಠಾಯಿಗಳನ್ನು ಇಲ್ಲೇ ಇಟ್ಟು, ಆತನ್ಗಾಗಲೆಲ್ಲ ಒಂದೊಂದನ್ನೇ ಕೊಡು!” ಎಂದು ಹೆಂಡತಿಗೆ ಹೇಳಿದರು.

ಸರೋಜನಿಯು– ಇನ್ನೂ ಆರು ವರ್ಷಗಳು ತುಂಬಿಲ್ಲದ ಪಸುಳೆ—ಇಷ್ಟೆಲ್ಲವನ್ನೂ, ಅಲ್ಲಿ ನಿಂತು ನೋಡುತ್ತಿದ್ದಳು. ತನ್ನ ಚಿಕ್ಕ ತಮ್ಮನಿಗೆ ದೊಡ್ಡ “ಜಖಂ” ಉಂಟಾದುದಕ್ಕೆ ಆಕೆಗೆ ದುಃಖವುಂಟಾಗಿದೆ! ಆದರೆ, ತಾನು ಅಳಲಿಲ್ಲ. ಬೇಸರದ ಮುಖಮುದ್ರೆಯನ್ನು ಹಿಡಿದು ನಿಂತಿದ್ದಳು. ನಾಣುವು ಪೆಪ್ಪರ್‌ಮಿಠಾಯಿಯನ್ನು ಚೀಪುತ್ತ, ಸಿಹಿಯೆಂದು ಕಾಣಲು, ಕಿಸಕ್ಕನೆ ನಕ್ಕನು. ಕೋದಂಡರಾಯರು ನಕ್ಕರು; ಗೃಹಿಣಿಯೂ ನಕ್ಕಳು; ಇನ್ನು . . . . ಸರೋಜನಿಯೂ ನಕ್ಕಳು!

ಸರೋಜನಿಯ ನಗುವೆಂದರೆ ನಿಜವಾಗಿಯೂ ‘ಕಿಲ ಕಿಲ’ ನಗು. ನಿಮಗೆ ಪ್ರಸಿದ್ಧ ಸಂಗೀತಗಾರರ ಗಾಯನ ಕೇಳಿ ವೈರಾಗ್ಯ ಹಿಡಿದಿದ್ದರೆ ಸರೋಜನಿಯ ನಗುವನ್ನು ಕೇಳಿ ಆ ಬೇಸರವನ್ನು ನೀವು ಖಂಡಿತವಾಗಿಯೂ ಹೋಗಲಾಡಿಸು ಎರಿ. ಆ ಪುಟ್ಟ ತುಟಿಗಳು ಬಿರಿದು, ಬಿಳಿಯ ಚಿಕ್ಕ ದಂತ ಪಂಕ್ತಿಗಳು—ವಿದ್ಯುದ್ದೀಪವು ಬೆಳಗಿಸಲ್ಪಟ್ಟಂತೆ—ಜಗ್ಗೆಂದು ಕಾಣಿಸಿಕೊಂಡು, ಅವುಗಳ ನಡುವಿನಿಂದ ಕಿಲಕಿಲವೆಂದು ಕರ್ಣಮಧುರವಾದ ಆ ನಗು ಹೊರಟರೆ ನಿಮ್ಮ ಹೃದಯದ ದುಃಖಭಾರವು ಫಕ್ಕನೆ ತೊಲಗಿ, ನೀವು ಅವರ್ಣನೀಯವಾ ದ್ದೊಂದು ಆನಂದವನ್ನು ಖಂಡಿತವಾಗಿ ಅನುಭವಿಸುವಿರಿ.

ಆದರೆ, ಆಕೆಯ ತಾಯ್ತಂದೆಗಳಿಗೆ ಈ ನಗುವು ಅಷ್ಟು ಮಧುರವಾಗಿ ಕಾಣಿಸಲಿಲ್ಲ. ನಾಣುವು—ಕೋದಂಡರಾಯರ ಕುಲದೀಪ!—ದೊಡ್ಡ ಜಖಂ ಹೊಂದಿ ಅಲ್ಲಿ ಮಲಗಿರುವಾಗ ಸರೋಜನಿಯಂತಹ "ಮೈನರ"ರು ಹಾಗೆ ಗಟ್ಟಿಯಾಗಿ ನಗಬಹುದೇ?

"ಛೀ ಅನಿಷ್ಟ! ಬಾಯಿ ಮುಚ್ಚು!" ಎಂದಳು ತಾಯಿ. "ನಿನಗೆ ಸ್ಲೇಟು ತಂದುಕೊಟ್ಟಿದ್ದೆನಲ್ಲ—ಏನಾದರೂ ಗೀಚಿ ಹಾಕಬಾರದೇ?" ಎಂದು ಜಬರಿಸಿದನು ತಂದೆ.

ಸರೋಜನಿಯ ಆನಂದವು ಅಲ್ಲೇ ಕುಂದಿತು. ನಗುವ ಮಹಾ ಅಪರಾಧವನ್ನು ಆಕೆ ಮಾಡಿದ್ದಳು! ಹೋಗಲೆಂದು ಕೊಠಡಿಯ ಕಡೆಗೆ ತಿರುಗಿದಳು. ಆದರೆ, ಫಕ್ಕನೆ ಪೆಪ್ಪರ್ ಮಿಠಾಯಿಯ ನೆನಪಾಯಿತು: ಮೆಲ್ಲನೆ ತಂದೆಯ ಬಳಿಗೆ ಬಂದು, – –"ನನಗೂ ಒಂದು—ಪೆಪ್ಪರ್‌ಮಿಠಾಯಿ!" ಎಂದಳು.

"ಪೆಪ್ಪರ್‌ಮಿಠಾಯಿ!-ನಿನಗೆ!!" ಅಬ್ಬರಿಸಿದನು ತಂದೆ. ಇಂತಹ ಪ್ರಶ್ನೆಯನ್ನು ಸರೋಜನಿಯು ಕೇಳುವುದೆಂದರೆ!

"ಒಂದು ಮಾತ್ರ!" ಎಂದಳು ಸರೋಜನಿ.

"ಕೊಡಬಾರದೇ ಒಂದು?" ಎಂದಳು ಗೃಹಿಣಿ.

"ಮಗುವಿಗೆ ಜಖಂ! ಈಕೆಗೇಕಂತೆ ಪೆಪ್ಪರ್‌ಮಿಠಾಯಿ?" ಎನ್ನುತ್ತ ಕೋದಂಡರಾಯರು, ಸರೋಜನಿಯ ಕಡೆಗೆ ತಿರುಗಿ, "ನೀನೇನು ಬಿದ್ದಿರುವೆಯಾ, – – ಪೆಪ್ಪರ್‌ಮಿಠಾಯಿ ಕೇಳಲು?" ಎಂದು ಕಣ್ಣು ಕೆರಳಿಸಿದರು.

ಬಾಲೆಯು ಹಿಮ್ಮೆಟ್ಟಿದಳು. ಒಂದು ಪೆಪ್ಪರ್‌ಮಿಠಾಯಿ ದೊರೆಯುವುದು ಇಷ್ಟು ಅಸಂಭವವೆಂದು ಆಕೆಗೆ ತಿಳಿದುದು ಅದೇ ಮೊದಲು. ಯೋಚನೆಗೀಡಾದಳು. ಅರುವತ್ತರ ಮುದಿಯರ ಮುಖದ ಮೇಲೂ ಕಾಣದ ಚಿಂತಾಭಾರದ ಚಿಹ್ನೆಗಳಿಂದ ಮೆಲ್ಲನೆ ಹಜ್ಜೆಯಿಟ್ಟು ಜಗಲಿಯಿಂದ ಕೆಳಗಿಳಿದು ಹೋದಳು.

❃ ❃ ❃ ❃

ನಾಣುವು ಆರು ನಿಮಿಷಗಳೊಳಗೆ ಆರು ಪೆಪ್ಪರ್ ಮಿಠಾಯಿಗಳನ್ನೂ ನುಂಗಿ ಮುಗಿಸಿ, ಅದರೊಂದಿಗೆ ನಗುವನ್ನೂ ಮುಗಿಸಿ, ಏಳನೇ ಪೆಪ್ಪರ್‌ಮಿಠಾಯಿಗೆ ಕೈನೀಡಿದ್ದನು. “ಪೇಟೆಗೆ ಜನ ಹೋಗಿಬಂತು. ವಿಲಾಯತಿಯಿಂದ ಪೆಪ್ಪರ್ ಮಿಠಾಯಿ ಇನ್ನೂ ಬರಲಿಲ್ಲವಂತೆ. ಬಂದಕೂಡಲೇ ತರಿಸಿ ಕೊಡುತ್ತೇನೆ” ಎಂದು ತಂದೆ-ತಾಯ್ಗಳು ಸಮಾಧಾನ ಹೇಳುತ್ತಿದ್ದರು. ಆಗ ಸರೋಜನಿಯನ್ನು ಇಬ್ಬರು ದಾರಿಹೋಕರು ಹೊತ್ತುಕೊಂಡು ತಂದು,ರಾಯ-ರಾಣಿಯರ ಮುಂದೆ ಇಟ್ಟರು.

ಎಂಥ ದೃಶ್ಯ! ಸರೋಜನಿಯು ಮೂರ್ಛಿತಳಾಗಿ ಬಿದ್ದಿರುವಳು! ಹಣೆಯೊಡೆದಿದೆ! ಉಟ್ಟುಕೊಂಡ “ಗವನು” ರಕ್ತಮಯ!

ತಂದೆಯು ಗಾಬರಿಗೊಂಡನು. ತಾಯಿಯು ಧಾರಾಳವಾಗಿ ಅತ್ತಳು. ತಂದೆಯ ಗಾಬರಿಯೂ, ತಾಯಿಯ ರೋದನವೂ ಅರೆತಾಸಿನ ತನಕ ಅವಿರಾಮವಾಗಿ ನಡೆಯುತ್ತಿರಲು—ಡಾಕ್ಟರರ ಮಾತಿಲ್ಲದೆ ಸರೋಜನಿಯು ಕಣ್ತೆರೆದಳು. ಎದುರಲ್ಲೇ ತಾಯ್ತಂದೆಗಳು! ಸರೋಜನಿಯು ಭರವಸೆಯಿಂದ ನಕ್ಕಳು.

ಅಹುದು,—ನಕ್ಕಳು! ಸುಕೋಮಲವಾದ, ಆದರೂ ಗಂಭೀರವಾದ, ಶೌರ್ಯಸೂಚಕ ನಗುವದು!

"ಎಲ್ಲಿ ಬಿದ್ದೆ ಅವ್ಮಾ?" ಎಂದು ಕೇಳಿದಳು ತಾಯಿ. "ಮೇಲಿನ ಹಿತ್ತಲಿಂದ ಕೆಳಗಿನ ಹಿತ್ತಲಿಗೆ—ನಾನೇ ದುಮುಕಿದೆ! . . . . . ಅಮ್ಮಾ, ಈಗ ನನಗೆ ಪೆಪ್ಪರ್‌ಮಿಠಾಯಿ ಕೊಡಬಹುದೆ?"

ತಾಯಿಯು ಉತ್ತರ ಕೊಡದೆ, ಮತ್ತೊಮ್ಮೆ "ಗೋ" ಎಂದು ಅತ್ತಳು. ತಂದೆಗೆ ಉಸಿರೇ ಇಲ್ಲ.

"ಏನಮ್ಮಾ, ಕೊಡಬಹುದೇ? . . . . ನೋಡಮ್ಮಾ! ನನಗೆ ನಿಜವಾಗಿಯೂ ಗಾಯವಾಗಿದೆ. ಅಮ್ಮಾ, ಈ ಗಾಯ ಸಾಲದೇ—ಪೆಪ್ಪರ್‌ಮಿಠಾಯಿ ದೊರೆಯಲು ?" (ಸರೋಜನಿಯ ಮುಖದ ಮೇಲೆ ಆತುರ.)

ಪಿಟ್ಟೆಂದು ಮಾತಾಡದೆ, ಕೋದಂಡರಾಯರು ಪೇಟೆಗೆ ಹೋಗಿ ಒಂದು ರಾತಲು ಪೆಪ್ಪರ್‌ಮಿಠಾಯಿಯನ್ನು ತಂದು ಸರೋಜನಿಯ ಕೈಗೆ ಕೊಟ್ಟರು ಪಸುಳೆಯು ಅದನ್ನು ಕೈಯಲ್ಲಿ ಹಿಡಿದು ನಿದ್ದೆ ಹೋಯಿತು!



# ೧೮. ಜೀವನದ ಗುರಿ.

ಮೊನ್ನೆ ನನ್ನ ತತ್ತ್ವಜಿಜ್ಞಾಸಿ-ಸ್ನೇಹಿತನನ್ನು ಭೇಟಿಯಾಗಿ, ಆತನೊಡನೆ ಮಾತುಕತೆ ನಡೆದಿರಲು,—ಅದೊಂದು ಸಂದರ್ಭದಲ್ಲಿ "ಜೀವನದ ಗುರಿಯೇನು?" ಎಂದು ಕೇಳಿಬಿಟ್ಟೆ.

"ಜೀವನವೆಂದರೇನೆಂದು ತಿಳಿದುಕೊಂಡು, ಅದರಂತೆ ನಡೆದುಕೊಂಡರೆ, ತಾನಾಗಿ ಅಲ್ಲಿಗೆ ಮುಟ್ಟುವೆವು!" ಎಂದನು.

"ಗುರಿ . . . ಜೀವನದ ಗುರಿ 'ಸಾವು' ಅಲ್ಲವೇ?" ಎಂದು ನನ್ನ ಪ್ರಶ್ನೆ, ಪುನಃ.

"ಅಲ್ಲ; ಗುರಿ ಅದಾದರೆ ಎಷ್ಟೋ ಜನರು, ಆ ತಿಳಿವು ಹುಟ್ಟಿದ ಕೂಡಲೇ ಗುರಿ ಮುಟ್ಟುತ್ತಿದ್ದರು. ಆದರೆ, ಸಾಯದಿರುವುದು ಹೇಗೆಂಬ ಅನ್ವೇಷಣದಲ್ಲಿಯೇ ಜಗತ್ತು ಇದೆ. ಜೀವನದ ಗುರಿಯು ಮರಣವೆನ್ನುವವರೇ ಆ ಗುರಿಗೆ ಮುಟ್ಟದಿರಲು ಯತ್ನಿಸುತ್ತಿರುವರು" ಎಂದುತ್ತರ ಕೊಟ್ಟನು.

ಹಾಗೆ ಹೇಳಿದವನಿಗೇ ಒಂದು ಘಟನೆಯೂ ಜ್ಞಾಪಕಕ್ಕೆ ಬಂದು, ಅದನ್ನು ನನಗೆ ಹೇಳಿದನು. ಅದರ ಸಾರಾಂಶವೇ ಈ "ಕತೆ".

ವೇಂಕುವು ನಮ್ಮ-ನಿಮ್ಮ ಹಾಗೆಯೇ ಒಬ್ಬ ಮನುಷ್ಯ. ಸಾಲೆಗೆ ಹೋಗಿದ್ದನು; ಬರಹ ಕಲಿತಿದ್ದನು; ಅವೆರಡರ ಸಹಜಫಲವಾಗಿ ಕಾದಂಬರಿಗಳನ್ನು ಓದುತ್ತಿದ್ದನು. ಅವನ ನಾಲ್ಕನೆ ಕರ್ತವ್ಯವು ಅವನಿಗೆ ಒಂದು ದಿನ ಹೊಳೆಯಿತು:—ತಾನೊಂದು ವಿವಾಹವಾಗಬೇಕು—ಆಗಲೇ ಬೇಕು!

ಅಂದೇ ಆತನಿರುವ ಮನೆಯ ಮುಂದಿನಿಂದ ಚಿಕ್ಕ ಲಿಲ್ಲಿಯು ಸಾಲೆಗೆ ಹೋಗುತ್ತಿರುವುದನ್ನು ಕಂಡನು. ಲಿಲ್ಲಿಯನ್ನು ಅವನು ಹಿಂದೆ ಎಷ್ಟೋ ಬಾರಿ ನೋಡಿದ್ದನಾದರೂ ಈ ದಿನ ಆತನಿಗೆ ಆಕೆ ಫಕ್ಕನೆ ಮಹಾ ರೂಪೀಯಸಿಯಾಗಿ ಕಂಡಳು. (ಲಿಲ್ಲಿಯ ವಯಸ್ಸು ಇನ್ನೂ ಹನ್ನೆರಡು ದಾಟಿರಲಿಲ್ಲ.)

"ಲಿಲ್ಲಿ!" ಎಂದನು.

ಲಿಲ್ಲಿ ನಿಂತಳು.

"ಎಲ್ಲಿಗೆ ಹೋಗುತ್ತಿ ಲಿಲ್ಲಿ?"

"ಕಾಣದೇ ನಿನಗೆ ಮುಠ್ಠಾಳ? ಸಾಲೆಗೆ!" ಎಂದುತ್ತರ ವಿತ್ತಳು ತುಂಟ ಲಿಲ್ಲಿ.

"ಸಾಲೆಗೆ! ಸಾಲೆಗೆ! . . . . ಲಿಲ್ಲಿ!"

"ಏನು?"

"ಕೊಂಚ ನಿಲ್ಲು ಲಿಲ್ಲಿ!"

"ನನಗೆ ಸಾಲೆಯಿಲ್ಲವೇ?"

"ಇದೆ ಲಿಲ್ಲಿ. ಆದರೆ, ಆದರೆ, ಆದರೆ, . . . . ನಾನು ಇಲ್ಲಿಯೇ ಇರುವೆನಲ್ಲ ಲಿಲ್ಲಿ! ನಿನಗೇಕೆ ಸಾಲೆ?"

"ಬರಹ ಕಲಿಯಲು!"

"ಬರಹ, ಬರಹ! ಎಂಥಾ ಬರಹ ಲಿಲ್ಲಿ?....ಲಿಲ್ಲಿ, ನಿನಗೆ ಮದುವೆ ಯಾವಾಗ ಲಿಲ್ಲಿ?"

"ನೀನು ಸತ್ತ ಮೇಲೆ!" ಎನ್ನುತ್ತ, ಲಿಲ್ಲಿ ಓಡಿಹೋದಳು.

ವೇಂಕುವು, ದುಂಡಗಿನ ವೈಯ್ಯ ಆ ಬಾಲೆಯು ಓಡುತ್ತಿರುವುದನ್ನು ಪ್ರೇಮಪೂರ್ಣನಯನಗಳಿಂದ ನೋಡುತ್ತ,

"ಸತ್ತ ಮೇಲೆ! ಸತ್ತ ಮೇಲೆ!" ಎಂದು ಒಂದು ನಿಟ್ಟುಸಿರು ಬಿಟ್ಟನು. ಕೆಲವು ಕ್ಷಣ ಮೌನವಾಗಿ ಚಿಂತಿಸುತ್ತ, ಕೊನೆಗೆ ಏನೋ ಸವಿಯಾದ ಆಲೋಚನೆಯೊಂದು ಹೊಳೆಯಿತೆಂದು ತೋರುವುದು,—ನಕ್ಕುಬಿಟ್ಟನು!

ಇದೆಲ್ಲವನ್ನೂ ಅವನ ತಾಯಿ ಒಳಗಿಂದ ನೋಡುತ್ತಿದ್ದಳು.

ನಿತ್ಯವೂ ಲಿಲ್ಲಿಯನ್ನು ರಸ್ತೆಯಲ್ಲಿ ನಿಲ್ಲಿಸಲು ಆರಂಭವಾಯಿತು. ಮೊದಮೊದಲು ಆಕೆ, ಇದು ಮಂಗಚೇಷ್ಟೆ ಎಂದು ನೆನಸಿದ್ದಳು. ಆದರೆ, ವೇಂಕುವಿನ ಕಣ್ಣುಗಳಲ್ಲಿನ ಒಂದು ವಿಜಾತೀಯ ಛಾಯೆಯು ಆ ಚಿಕ್ಕ ಬಾಲೆಯಲ್ಲೂ ಏನೋ ಒಂದು ತರದ ಭೀತಿ ಹುಟ್ಟಿಸಿತು. ಆಕೆ, ಆ ಮಾರ್ಗವಾಗಿ ಹೋಗುವುದನ್ನೆ ಬಿಟ್ಟುಬಿಟ್ಟಳು!

ವೇಂಕುವು ಉನ್ಮತ್ತನಂತಾದನು. ಲಿಲ್ಲಿಯನ್ನು ನೋಡದೆ ಆತನಿಗೆ ನೆಮ್ಮದಿಯೇ ಇಲ್ಲ. ನಗರದ ರಸ್ತೆಗಳಿಗೂ ಬಂದು, ಲಿಲ್ಲಿ ಯಾವ ರಸ್ತೆಯಾಗಿ ಸಾಲೆಗೆ ಹೋಗುವಳೋ ಎಂಬುದನ್ನು ಕಂಡುಹಿಡಿಯಲಾರಂಭಿಸಿದನು. ಒಂದು ದಿನ ಆಕೆ ಸಿಕ್ಕಿದಳು. ಆದರೆ, ಇವನನ್ನು ಕಾಣುತ್ತಲೇ ಓಡತೊಡಗಿದಳು!

ಬಾಲೆಯು ತನ್ನನ್ನು ನೋಡಿ ಭಯಪಡುತ್ತಿರುವಳೆಂದು ವೇಂಕುವಿಗೆ ತಿಳಿಯಲಿಲ್ಲ. ಮರುದಿನವೂ ಆಕೆಯನ್ನು ಹುಡುಕಿ ಬಂದನು. ರಸ್ತೆಗಳಲ್ಲೆಲ್ಲಿಯೂ ಸಿಗದಿರಲು, ಸಾಲೆಯ ಬಳಿಗೇ ಹೋಗಿ, ಸಾಲೆಯಿಂದ ಬರುವಾಗ ಕಾದು ನಿಂತು, ನೋಡಿ ಆನಂದಪಟ್ಟನು.

ಮರುದಿನದಿಂದ ಲಿಲ್ಲಿಯು ಸಾಲೆಗೆ ಬರುವುದನ್ನೆ ನಿಲ್ಲಿಸಿ ಬಿಟ್ಟಳು.

ವೇಂಕುವು ಅಧೀರನಾದನು. ತನ್ನ ತಾಯಿಯೊಡನೆ ಪ್ರಸ್ತಾಪವೆತ್ತಿದನು. "ನನಗೆ ಮೊದಲೇ ತಿಳಿದಿದೆ. ನಾನು ಲಿಲ್ಲಿಯ ತಾಯಿಗೆ ಹೇಳಿ ಕಳುಹಿಸಿದಾಗ, ಶ್ರೀಮಂತರೊಬ್ಬ ರಲ್ಲಿಗೆ ಸಂಬಂಧ ನಿಶ್ಚೈಸಿಸಲಾಗಿದೆ ಎಂದರು" ಎಂದು ತಾಯಿ ಹೇಳಿದಳು.

ಊರಲ್ಲೆಲ್ಲ ಸುದ್ದಿಯಾಯಿತು. ಹೋದಲ್ಲೆಲ್ಲ ಜನರು, ವೇಂಕುವನ್ನು ನಿಲ್ಲಿಸಿ, ನಾನಾ ತರದಲ್ಲಿ ಕುಚೇಷ್ಟೆ ಮಾಡಿದರು. ವೇಂಕುವು ಕುಚೇಷ್ಟೆಯನ್ನು ತಿಳಿಯಲಾರದೆ, ಎಲ್ಲರ ಎಲ್ಲ ಸೂಚನೆಗಳಿಗೂ ತಲೆಯಲ್ಲಾಡಿಸಿದನು. ಕೊನೆಗೆ ಆತನಲ್ಲಿ ನಾಟಿ ಕುಳಿತ ಸೂಚನೆ ಒಂದೇ—"ಗುರುಗಳ ಬಳಿಗೆ ಹೋಗಿ, ಅವರ ಕಾಲಿಗೆರಗಿದರೆ, ಅವರು ನಿಶ್ಚಯವಾಗಿಯೂ ಈ ವಿವಾಹವನ್ನು ಸಾಧಿಸಿಕೊಡಬಲ್ಲರು!"

ವೇಂಕುವಿಗೆ ಆ ರಾತ್ರೆ ನಿದ್ದೆ ಬರಲಿಲ್ಲ. ಮರುದಿನ ವೇಂಕುವು ಮನೆಯಿಂದ ಕಾಣೆ!

* * * * *

ಪ್ರಭಾತಕಾಲದಲ್ಲಿ ಗುರುಗಳು ಮಠದಲ್ಲಿ, ದೇವತಾರ್ಚನೆಯನ್ನು ಮುಗಿಸಿ ಕುಳಿತಿದ್ದರಷ್ಟೆ,—ವೇಂಕುವಿನ ಸವಾರಿ ಅತ್ತ ಬಂತು. ಗುರುಗಳು ಪ್ರಶ್ನಾಸೂಚಕ ದೃಷ್ಟಿಯೆತ್ತಿದರು. ವೇಂಕುವು ಅಳುತ್ತ,—ಅಹುದು, ಕಣ್ಣೀರು ಸುರಿಸುತ್ತ,—ಲಿಲ್ಲಿಯ ಕತೆಯನ್ನು ಹೇಳಿದನು.

ಇವನೇನೋ ಮಿದುಳು-ಭ್ರಮಣವಾಗಿ ಬಂದವನೆಂದು ಗುರುಗಳಿಗೆ ತಿಳಿಯಿತು. ಕರುಣೆಯಿಂದ, "ಕುಳಿತುಕೋ ವೇಂಕು!" ಎಂದರು. ಆನಂತರ,—ನೀನು ಸಂದೇಹ ಪಡ ಬೇಡ, ಇನ್ನು ಕೆಲವೇ ದಿನಗಳೊಳಗೆ ನಿನ್ನ ವಿವಾಹವನ್ನು, ಆ ಲಿಲ್ಲಿಯೊಂದಿಗೆ ಮಾಡಿಸುವ ಕಾರ್ಯಭಾರ ನನ್ನದು!" ಎಂದು ಅಭಯವಚನವಿತ್ತರು.

ವೇಂಕುವಿನ ಮುಖಕಮಲ ಅರಳಿತು. "ಗುರುಗಳೇ, ಆ ತನಕ ನಾನು ಇಲ್ಲೇ ಇರುವೆನು. ನನಗೆ ಮನೆಗೆ ಹೋಗಿ ಇರಲು ಏಕೋ ಭಯವಾಗುವುದು!" ಎಂದನು.

"ಆಗಲಿ!" ಎಂದರು ಗುರುಗಳು.

ದಿನಗಳ ಮೇಲೆ ದಿನಗಳು ಕಳೆದುವು. ನಿತ್ಯವೂ ವೇಂಕುವು "ಯಾವಾಗ ಗುರುಗಳೇ?" ಎನ್ನುವನು. "ಅವಸರ ಮಾಡಬೇಡ. ನಾಳೆ ಅಥವಾ ನಾಡದು" ಎನ್ನುವರು ಗುರುಗಳು.

ಹೀಗೆ ಒಂದು ತಿಂಗಳು ಕಳೆಯಿತು. ವೇಂಕುವಿನ ಮಿದುಳು—ವಿಭ್ರಮಣದ ಚಿಹ್ನೆಗಳು ಕೊಂಚ ಮಾಯ ವಾಗುತ್ತ ಬಂದಂತೆ ತೋರಿತು. ಇನ್ನೀತನನ್ನು ವಂಚಿಸುವು ದವಶ್ಯವಿಲ್ಲವೆಂದು ನೆನಸಿ, ಗುರುಗಳು, "ವೇಂಕು, ನಿನಗೆ ಹುಚ್ಚೇ? ಲಿಲ್ಲಿಯ ಮದುವೆ ಮೊನ್ನೆ ನಡೆದುಹೋಯಿತು!" ಎಂದರು.

ವೇಂಕುವು ಸ್ತಂಭೀಭೂತನಾದನು.

ಆ ಮೇಲೆ ಗುರುಗಳು ಒಂದು ಚಿಕ್ಕ ಉಪದೇಶ ಮಾಡಿದರು:—“ವೇಂಕು, ಜೀವನವೆಂದರೇನು? ಜೀವನದ ಗುರಿಯೇನು? ಬಲ್ಲೆಯಾ? ಮದುವೆಯಂತೆ, ಮದುವೆ!!! ಜೀವನದ ಗುರಿಯೆಂದರೆ ವೇಂಕು—ಪರಮಾತ್ಮನ ಧ್ಯಾನ ಮಾಡಿಕೊಂಡಿದ್ದು, ಆತನ ಕರೆ ಬಂದಾಗ, ಧೈರ್ಯದಿಂದ ಹೊರಟುಹೋಗುವುದು—ಇದೇ ಜೀವನದ ಗುರಿ!”

ವೇಂಕುವು ಉತ್ತರ ಕೊಡಲಿಲ್ಲ. ಆ ಉಪದೇಶವನ್ನು ಕೇಳಿದಂತೆಯೂ ತೋರಲಿಲ್ಲ.

ಗುರುಗಳು ಸಮಾಧಾನವಾಕ್ಯನ್ನಾಡಿದರು:—

“ಆದರೂ, ಹೆದರದಿರು ವೇಂಕು! ಲಿಲ್ಲಿಗಿಂತ ಒಳ್ಳೆಯ ಹುಡುಗಿ ನಿನಗೆ ದೊರೆವಂತೆ ನಮ್ಮ ಆಶೀರ್ವಾದ!”

“ಆಶೀರ್ವಾದ? ನಿಮ್ಮದು? ಹೇ ಮೂರ್ಖಾ!” ಎನ್ನುತ್ತ ವೇಂಕುವು ದೊಪ್ಪನೆ ಅಲ್ಲೇ ಬಿದ್ದುಬಿಟ್ಟನು.

ಶೈತ್ಯೋಪಚಾರವಾಯಿತು. ವೇಂಕುವು ಎದ್ದು ಕುಳಿತನು. “ಲಿಲ್ಲಿಗೆ ಮೊನ್ನೆ ಮದುವೆಯಾಯಿತು!” ಎಂದುಕೊಂಡನು. “ಮದುವೆ ನೀನು ಸತ್ತ ಮೇಲೆ!” ಎಂದು, ಲಿಲ್ಲಿ ಅಂದು ತನಗೆ ಹೇಳಿದುದನ್ನು ಸ್ಮರಿಸಿ, ಬಾಯಲ್ಲಿ ಉಚ್ಚರಿಸಿದನು.

* * * * *

ಮರುದಿನ ಬೆಳಿಗ್ಗೆ ವೇಂಕುವಿನ ಶವವು, ಮಠದ ಕೆರೆಯಲ್ಲಿ ತೇಲಾಡುತ್ತಿತ್ತು. ಕೆರೆಯ ದಂಡೆಯ ಮೇಲೊಂದು ಪತ್ರ. ಅದರಲ್ಲಿ,—

"ಧೈರ್ಯದಿಂದ ಸಾಯುವುದೇ ಜೀವನದ ಗುರಿ ಎಂದು ಗುರುಗಳು ಹೇಳಿರುವರು. 'ನಿನಗೆ ಮದುವೆ ನೀನು ಸತ್ತ ಮೇಲೆ!' ಎಂದು ಲಿಲ್ಲಿಯೂ ಹೇಳಿದ್ದಳು. ನಾನು ಸಾಯುತ್ತೇನೆ. ನಾನು ಸತ್ತ ಮೇಲೆ, ಇದರೊಂದಿಗೆ ಇರುವ ಪತ್ರವನ್ನು ನನ್ನ ಎದೆಯ ಮೇಲಿಟ್ಟು ನನ್ನನ್ನು ಸುಡಿರಿ!" ಎಂದು ಬರೆದಿತ್ತು.

ಪತ್ರದ ಹಿಂಬದಿಯಲ್ಲಿ "ಲಿಲ್ಲಿ—ಲಿಲ್ಲಿ—ಲಿಲ್ಲಿ——" ಎಂದು ನೂರಾರು 'ಲಿಲ್ಲಿ'ಗಳನ್ನು ಗೀಚಿಹಾಕಿದ್ದನು!



ಮಂಗಳೂರು ಪ್ರೆಸ್, ರಥಬೀದಿ, ಮಂಗಳೂರು.